|| ಶ್ರೀ: ||

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ,

ಉಡುಪಿ.

ಪುರಂದರದಾಸರ

# ಸುಳಾದಿಗಳು.

ಪ್ರಥಮಾವೃತ್ತಿ.

ಶ್ರೀಕೃಷ್ಣಮುದ್ರಣಾಲಯ, ಉಡುಪಿ.

1927.

ಕ್ರಯ: 0—8—0.

Checked 1969

# ಪ್ರಸ್ತಾವನೆ.

ದಾಸಕೂಟಕ್ಕೆ ಆದಿಪುರುಷರೂ ಶ್ರೀನಾರದಾಂಶರೂ ಆದ **ಶ್ರೀಪುರಂದರದಾಸವರ್ಯರು** ಶ್ರೀಮಧ್ವಶಾಸ್ತ್ರದ ಮುಖ್ಯ ಪ್ರಮೇಯವಾದ ಶ್ರೀಹರಿಸರ್ವೋತ್ತಮತ್ವವನ್ನು ಸುಲಭವಾಗಿ ಸ್ತ್ರೀಬಾಲಾದಿಯಾಗಿ ಅತಿ ಪಾಮರರೂ ಕೂಡ ಮನಮುಟ್ಟಿ ತಿಳಿದು, ಪರಮಾತ್ಮನನ್ನು ಭಕ್ತಿಯಿಂದ ಯಾವ ಕಷ್ಟವೂ ಇಲ್ಲದ ಕೀರ್ತನಸೇವೆಯಿಂದಲಾದರೂ ಭಜಿಸಿ, ಕೃತಾರ್ಥರಾಗಲೆಂದು ಅನೇಕ ಕೀರ್ತನೆಗಳನ್ನು ಮಾಡಿ, ನಮ್ಮೆಲ್ಲರನ್ನೂ ಉದ್ಧರಿಸಿದ್ದಾರೆಂಬದು ಸರ್ವರಿಗೂ ವೇದ್ಯವಾದುದು.

ಆ ಮಹಾತ್ಮರ ಕೀರ್ತನೆಗಳು ಎಷ್ಟೆಷ್ಟುಕಡೆ ಸಂಗ್ರಹಿಸಲ್ಪಟ್ಟಿದ್ದರೂ ಇನ್ನೂ ಪ್ರಕಟಿತಗಳಾಗದ ಕೀರ್ತನೆಗಳು ಅಲ್ಲಲ್ಲಿ ಮುಖಪಾಠವಾಗಿವೆ. ಅದರಂತೆ ಈ ಮಹನೀಯರು ಸುಳಾದಿಗಳನ್ನೂ ರಚಿಸಿದ್ದಾರೆ. 'ಸುಳಿದರೆ ಸುಳಾದಿ' ಎಂಬ ದಾಸಕೂಟದವರ ಗಾದೆಯಿಂದ ಶ್ರೀಹರಿಯು ಕಣ್ಣೆದುರು ಸುಳಿದಾಗ ರಚಿಸಿದ ಕೀರ್ತನೆಗಳೇ ಸುಳಾದಿಗಳೆಂದು ತಿಳಿದುಬರುವುದರಿಂದ ಇವುಗಳಲ್ಲಿ ಅತಿಮಹತ್ವವಿದೆ.

ಆದರೆ ಆ ಸುಳಾದಿಗಳಿವೆಯೆಂದು ಕೇಳುತ್ತಿದ್ದರೂ ಈ ವರೆಗೆ ದೊರಕದಿದ್ದು ದೈವಯೋಗದಿಂದ ಅತಿಜೀರ್ಣಪ್ರತಿಯೊಂದು ಕೈಸೇರಿ ಅದರಲ್ಲಲ್ಲಲ್ಲಿ ವರಳೆಹಿಡಿದು ಕೆಲವಕ್ಷರ ಕಾಣದೆಯಿದ್ದರೂ ಇದ್ದಷ್ಟನ್ನಾದರೂ ಪ್ರಕಟಿಸದಿದ್ದರೆ ಗ್ರಂಥವೇ ಇಲ್ಲದಂತಾದೀತೆಂದು ಛಾಪಿಸಿರುತ್ತೇವೆ. ಅಕ್ಷರ ತೋರದಿದ್ದಲ್ಲಿ ......ಈ ಗುರುತುಗಳನ್ನು ಕೊಟ್ಟಿದ್ದೇವೆ. ಈ ಸುಳಾದಿಗಳ ನಡುವೆ ಅಲ್ಲಲ್ಲಿ ಪ್ರಾಸಗಳು ಕಾಣದಿದ್ದರೂ ಶ್ರೀಪುರಂದರದಾಸರ ಸಾಕ್ಷಾತ್ ಶಿಷ್ಯರಾದ ಶ್ರೀವಿಜಯದಾಸರೇ 'ಅವರಂದ ವಚನವೆಲ್ಲ ವೇದಾರ್ಥವಿದೆ' ಎಂದು ತಮ್ಮ ಗುರುಕೀರ್ತನಸ್ತುತಿಯಲ್ಲಿ ಆ ಗುರುವಚನ ವೇದವಚನಸಮವೆಂದು ಹೇಳಿದ್ದರಿಂದ ಯಾವ ದೋಷಾರೋಪಣೆಯೂ ಈ ಗುರೂಕ್ತಿಗಳಿಗೆ ಯುಕ್ತವಲ್ಲ. ಈ ಸುಳಾದಿಗಳು ಮಾತ್ರವಲ್ಲದೆ ಅದೇ ಪುಸ್ತಕದಲ್ಲಿ ದೊರಕಿದ

ಬೇರೆಬೇರೆ ನರಹರಿಕೃಷ್ಣ, ಅಂಬೆಗಾಲುಕೃಷ್ಣ, ಅಚಲಾನಂದವಿಠಲ, ಯೋಗೀಂದ್ರವಿಠಲ, ವರದಕೇಶವ, ಚನ್ನಕೇಶವವಿಠಲ, ಗುರುಮಧ್ವಪತಿ, ಶ್ರೀಪತಿವರದ, ನಂದವರದರಾಜ ಇತ್ಯಾದ್ಯಂಕಿತಗಳುಳ್ಳ ಸುಳಾದಿಗಳೂ ಅಪೂರ್ವಗಳೆಂದು ಇವುಗಳೊಡನೆ ಮುದ್ರಿಸಲ್ಪಟ್ಟಿದ್ದರೂ ಹೆಚ್ಚಾಗಿಯೂ ಮುಖ್ಯವಾಗಿಯೂ ಶ್ರೀಪುರಂದರದಾಸರ ಸುಳಾದಿಗಳೇ ಇವರಲ್ಲಿರುವುದರಿಂದ 'ಶ್ರೀಪುರಂದರದಾಸರ ಸುಳಾದಿಗಳು' ಯೆಂದೇ ಈ ಗ್ರಂಥಕ್ಕೆ ಹೆಸರನ್ನಿಟ್ಟಿದ್ದೇವೆ.

ಶೋಧನವಲ್ಲಾದಷ್ಟು ಯತ್ನಿಸಿದ್ದರೂ ದೊಡ್ಡವರ ಉಕ್ತಿಗಳನ್ನು ಮನಗಂಡಂತೆ ಬದಲಾಯಿಸುವುದರಿಂದಲೂ ಇದ್ದಹಾಗೆ ಇಡುವುದೇ ಲೇಸೆಂದು ಹಾಗೆಯೇ ಮುದ್ರಿಸಿದ್ದೇವೆ. ಇತರ ಶುದ್ಧಪ್ರತಿಗಳು ಯಾರಲ್ಲಾದರೂ ಇದ್ದರೆ ಅವುಗಳನ್ನು ನಮಗೆ ದಯವಿಟ್ಟು ಕಳುಹಿಸಿದರೆ ಮುಂದಿನಮುದ್ರಣದಲ್ಲಿ ಸರಿಪಡಿಸುತ್ತೇವೆ.

ಇತಿ ಸುಜನವಿಧೇಯ,

**ಉಡುಪಿ.**
ತಾ. 25—2—1727.

ಪಾವಂಜೆ ಗುರುರಾವ್,
ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ.

# ಅನುಕ್ರಮಣಿಕೆ.




| | ಸುಳಾದಿಸಂಖ್ಯೆ. |
|---|---|
| ಪರಿಪೂರ್ಣನು ನೀನು ಬೊಮ್ಮಾಂಡ | ೧ |
| ಮಂಗಳಾಂಗ ಪಟ್ಟವಲ್ಲನಂಗ | ೨ |
| ಅಂಜುವೆ ನಾ ನಿನ್ನ ಸಿಂಗದ ಮೊಗ | ೩ |
| ಗಲಭೆಯದೇನೋ ಬೊಮ್ಮಾದಿಗಳ | ೪ |
| ಹುಟ್ಟುವ ಭೀತಿ ಹೊಂದುವ ಭೀತಿ | ೫ |
| ವ್ಯಾಸರಾಯರ ಚರಣಕಮಲ | ೬ |
| ಮನೆಮನೆ ಪಾತ್ರೆಯ ಕೋಟಲೆಯು | ೭ |
| ತಾಯಿ ಲಕ್ಷುಮಿ ತಂದೆ ವಿರಳ | ೮ |
| ರತಿಪತಿಪಿತನೆಂಬ ಚೆಲುವನುಕ್ಕದು | ೯ |
| ಅಂಗುಷ್ಠಮಾತುರವೆಂಬೊ | ೧೦ |
| ಒಡೆಯ ಹಾವಿಗೆ ಮೆಟ್ಟಿ | ೧೧ |
| ಅಕಿಂಚನಗನಸ್ವರ್ಗವಾದಂತೆ | ೧೨ |
| ಕ್ಷೀರಸಾಗರದಲ್ಲಿ ಹಾಸಿವ | ೧೩ |
| ಪೊಂಬಣ್ಣದ ಹಕ್ಕಿಯ ಮೇಲೊಬ್ಬ | ೧೪ |
| ಶಿವನೆ ಶುಕಯೋಗಿ ಕಾಣರೊ | ೧೫ |
| ಇದರಿಂದ ಬಿಟ್ಟನಿಲ್ಲೆಂಬ | ೧೬ |
| ತ್ರಿಶೂಲ ಡಮರುಗ ಭಸಿತ | ೧೭ |
| ಗೋಪಿದೇವಿಯುಂತೊರಳಲ್ಲಿ ಕಟ್ಟಿದೆ | ೧೮ |
| ಎಂಭತ್ತುನಾಲ್ಕುಲಕ್ಷ ಯೋನಿ | ೧೯ |
| ವನಗಿರಿಯಿಂದ ತಿಮ್ಮರಾಯ | ೨೦ |
| ಬೆಳಗಪ್ಪ ಜಾವದಲಿ ತಿಳಿನಿದ್ರೆಗಂಗಳ | ೨೧ |
| ಹರಿ ನಡೆಯದಿರಲು ನಡೆಯದೆಲ್ಲ | ೨೨ |
| ಮಾರಿಪಶೋಕ ಮುಳ್ಳುಮುಳ್ಳಿಗೆ ದಂಡೆ | ೨೩ |
| ಅಚ್ಯುತ ಸುಗುಣ ಯೆನ್ನ ಕಣ್ಣಮುಂದೆ | ೨೪ |
| ನರಹರಿ ಅಂದಿಂದೆಂದು ಮಂದರಗಿರಿ | ೨೫ |
| ಒಂದಪರಾಧವೆ ಹರಿಹರಿ | ೨೬ |
| ಮುಕುತಿಸುಖದೊಳು ಪರವು | ೨೭ |
| ಗಜದಲ್ಲಿ ಗಜರೂಪನಾಗಿ | ೨೮ |
| ವಿಷ್ಣುಭಕ್ತಿ ಯೋಗ್ಯ ತಾರತಮ್ಯ | ೨೯ |
| ಅಣುವಾಗಬಲ್ಲ ಮಹತ್ತಾಗಬಲ್ಲ | ೩೦ |
| ಆಳುಗಳ ಪರಿಯು ಆಳಿದನೆ ಬಲ್ಲ | ೩೧ |
| ಕಿನ್ನರ ಕಿಂಪುರುಷರು ನಭದಲಿ | ೩೨ |
| ಗಜಮುಖನಯ್ಯನಯ್ಯನಯ್ಯ | ೩೩ |
| ಹರಿಶರಣರೆನ್ನ ಮನೆಯ | ೩೪ |
| ಅಣುಮೂರುತಿಗಳು ನಿತ್ಯವಾಗಿ | ೩೫ |
| ಹರೆಯು ಉಳ್ಳವನೆಂಬೆನೆ | ೩೬ |
| ಅಯ್ಯಯ್ಯಾ ಕೈಕೆ ಮುನಿದರೆ | ೩೭ |
| ಖಳರ ನೋಟವೆ ಹಾವಲ್ಲವೆ | ೩೮ |
| ನೀನೆ ಕಾರಣನಾಗಿಹಾ ಅಕಾರಣರು | ೩೯ |
| ಸ್ವರ್ಗ ಮರ್ತ್ಯ ಪಾತಾಳಗಳಲ್ಲಿ | ೪೦ |
| ಪ್ರಳಯೋದಕದಲ್ಲಿ ವಟಪತ್ರಶಯನ | ೪೧ |
| ವಿಶ್ವವ್ಯಾಪಕಮೂರುತಿಯಾಗಿ | ೪೨ |
| ಆದಿಮೂರುತಿಯಾಗಿ ಅವ್ಯಾಕೃತ | ೪೩ |
| ಸರ್ವಜ್ಞ ಹರಿಗೆ ಅಸರ್ವಜ್ಞತೆಯಾ | ೪೪ |

ಸುಳಾದಿಸಂಖ್ಯೆ.

ಸುಳಾದಿಸಂಖ್ಯೆ.

ನೀಲಮೇಘಶ್ಯಾಮಾ ಕೋಮಲಾಂಗ ೪೫
ಶ್ರೀಪತಿ ಸಲಹೆಂದು ನೆನಸಂಥಾ ೪೬
ತನ್ನಾ ಶರಣರಾ ಜರದಡಂ ೪೭
ತಳಿರಂತೆ ಹೆಜ್ಜೆಹೆಜ್ಜೆಗೆ ೪೮
ಭಯವೆಂಬಾ ಗಜಕೆ ಪಂಚಾನನ ೪೯
ಕಾಮ ಕಂಗೆಡಿಸುತಲಿದೆ ೫೦
ಸುರನದಿಯ ಪಡೆದಾ ಚರಣಾಂ ೫೧
ನೋಡೆಲೆ ಮನವೇ ಜಗದೀಶ ೫೨
ಯೆಲ್ಲಿಯ ಮಥುರಾಪುರ ಇನ್ನೆಲ್ಲಿಯ ೫೩
ಲಕ್ಷ್ಮಿಯ ಮಸ್ತಕಕೆ ಮಣಿ ೫೪
ಜಾನಕಿಯ ರಮಣಾ ರಾಮಗೆ ೫೫
ಶ್ರೀರಘುರಾಮಾ ಯೆಂದಾರಾದರು ೫೬
ಪರಬೊಮ್ಮಾ ಹರಿಯು ತಾಂ ೫೭
ಕಂಡೆನಯ್ಯಾ ಕಂಡೆನಯ್ಯಾ ೫೮
ತರುಣಿ ನಿನ್ನಾ ಕಾಲಿರಗಿ ೫೯
ಹಿರಣ್ಯಕನುದರ ಬಗಿದು ೬೦
ಗಂಗಾಜನಕಾ ನಿನ್ನ ಪಾದಂಗಳ ೬೧
ಕೊಂಬು ಕೊಳಲುಗಳಾ ತಿತ್ತಿರಿ ೬೨
ಶ್ರೀವಿಭುವೆ ನಿನ್ನ ಘನಮಹಿಮೆ ೬೩
ವೃಂದಾವನದಲ್ಲಿ ಸುಳಿವನಲ್ಲೆ ೬೪
ಕಡುಮುದ್ದು ಕೃಷ್ಣ ಗೋಕುಲದಲ್ಲಿ ೬೫
ಹರಿ ರವಿಯುದಯವ ಕಾಣುತಾ ೬೬
ಸುರಮುನಿ ಭೂಸುರಲೋಕಂಗಳಲ್ಲಿ ೬೭
ಯೆಲೆ ಮನ ಮೊದಲಾದಖಿಲ ೬೮
ಮನಸಿಜನಯ್ಯನ ಮೂರುತಿಯ ೬೯
ನಡೆಯುಗಲಿಸುವರಯ್ಯ ಕೇಳ ೭೦
ಹೊನ್ನು ಹಣ ಹಾಗು ವೀಸ ಯೇಸು ೭೧
ಕಲ್ಪಾಂತವಾದಡಂ ಕೇಡಿಲ್ಲ ೭೨

**ಸಂಪೂರ್ಣವು.**

॥ ಶ್ರೀಃ ॥

॥ ಶ್ರೀಹರಯೇ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ಪುರಂದರದಾಸರ ಸುಳಾದಿಗಳು.

## ೧. ಪರಿಪೂರ್ಣಸುಳಾದಿ.

ರಾಗ ಯರಕಲಕಾಂಬೋಧಿ.

**ಧ್ರುವತಾಳ** ॥ ಪರಿಪೂರ್ಣನು ನೀನು ಬೊಮ್ಮಾಂಡಕೋಟಿಗಳಿಗೆ ಯೆಂತೆಡೆಗೊಟ್ಟೆ ಹೇಳಾ ॥ ಪರಿಪೂರ್ಣನು ನೀನು ಲಕುಮಿದೇವಿಯರಿಗೆ ಯೆಂತೆಡೆಗೊಟ್ಟೆ ಹೇಳಾ ॥ ಪರಿಪೂರ್ಣನು ನೀನು ಬೊಮ್ಮಾದಿ ಸುರರಿಗೆ ಯೆಂತೆಡೆಗೊಟ್ಟೆ ಹೇಳಾ ॥ ಪರಿಪೂರ್ಣನು ನೀನು ಅನಂತ ವೇದಗಳಿಗೆ ಯೆಂತೆಡೆಗೊಟ್ಟೆ ಹೇಳಾ ॥ ಪರಿಪೂರ್ಣನು ನೀನು ಅವ್ಯಾಕೃತಾಕಾಶಕ್ಕೆ ಯೆಂತೆಡೆಗೊಟ್ಟೆ ಹೇಳಾ ॥ ಪರಿಪೂರ್ಣನು ನೀನು ಪುರಂದರವಿಠಲ ಯೆಂತೆಡೆಗೊಟ್ಟೆ ಹೇಳಾ ॥ ೧ ॥

**ಮಟ್ಟೆತಾಳ** ॥ ಅಣುವಿಂಗಣುವಿಂಗಣುವಿಂಗೆ । ಅಣುವಿಂಗಣುವಿಂಗಣುವು ಗಡ ॥ ಮಹತ್ತು ಮಹತ್ತು ಮಹತ್ತಿಗೆ । ಮಹತ್ತು ಮಹತ್ತು ಮಹತ್ತು ಗಡ ॥ ಮಹತ್ತಾದ ಅಪರಿಮಿತಗಡಾ ॥ ಅಣೋರಣೀಯಾನ್ ಮಹತೋ ಮಹೀಯಾನ್ । ಗುಣಗಣಭರಿತ ಪುರಂದರವಿಠಲ ॥ ೨ ॥

**ಅಟ್ಟತಾಳ** ॥ ಕಾಣಾಚಿ ನಿನ್ನಾರ ಲಕುಮಿದೇವಿಯರಿಗೆ । ಕಾಣಾಚಿ ನಿನ್ನ ಸರ್ವಾಂಗ ॥ ಕಾಣಾಚಿ ನಿನ್ನ ಭವೇಂದ್ರಾದಿ ಸುರರಿಗೆ । ಕಾಣಾಚಿ ನಿನ್ನ ಸರ್ವಾಂಗ ॥ ಕಾಣಾಚಿ ಯೆನಗೆ ನೀ ಪುರಂದರವಿಠಲ । ಕಾಣಾಚಿ ನಿನ್ನ ಸರ್ವಾಂಗ ॥ ೩ ॥

**ಝಂಪೆತಾಳ** ॥ ಅಗ್ನಿಯೊಳಗಿದ್ದು ದಾಹಕಶಕುತಿಯನೀವೆ । ವಾಯುವಿನಲ್ಲಿದ್ದು ಶೋಷಶಕುತಿಯನೀವೆ । ವರುಣನಲ್ಲಿದ್ದು ಕ್ಲೇದಶಕುತಿಯನೀವೆ । ನಾನಾವಸ್ತುವಿನಲ್ಲಿದ್ದು ಇಂಥ ನಾನಾ ಶಕುತಿಗಳನೀವೆ । ಆರುಯೇನು ಘನ್ನಮಹಿಮರೊ ನೀನೆ ಪುರಂದರವಿಠಲಾ ॥ ೪ ॥

**ಏಕತಾಳ** ॥ ಕಂಡೆ ಕಂಡೆ ಕಮಲರಮಣನ । ಕಂಡೆ ಕಂಡೆ ಕಮಲಜನಯ್ಯನ । ಕಂಡೆ ಕಂಡೆ ಕೌಸ್ತುಭಧರನ । ಕಂಡೆ ಕಂಡೆ ವೈಜಯಂತಿಧರನ । ಕಂಡೆ ಕಂಡೆ ಚಕ್ರಪಾಣಿಯ । ಕಂಡೆ ಕಂಡೆ ಶಂಖಧರನ । ಕಂಡೆ ಕಂಡೆ ಕರುಣಾಳು ಪುರಂದರವಿಠಲನ ॥ ೫ ॥

**ಜತೆ** ॥ ಇನಿತು ಕಾರಣಮನಿತು ನೀನೆ । ನಿನಗೂ ಎನಗೂ ಪುರಂದರವಿಠಲಾ ॥ ೬ ॥ ಶ್ರೀಃ ॥

## ೨. ವೆಂಕಟೇಶಸುಳಾದಿ.

**ಧ್ರುವತಾಳ** ॥ ಮಂಗಳಾಂಗ ವಟ್ಟೆದಲ್ಲನಂಗಸುಖವಿತ್ತಳವ್ವೆ । ಅಂಗನೆ ಲಕುಮವ್ವೆ ತುಂಬುರದೊಳಿಪ್ಪಳವ್ವೆ । ಶೃಂಗಾರವಾದಳವ್ವೆ ಭಂಗಾರವಾದಳವ್ವೆ। ರಂಗ ಪುರಂದರವಿಠಲ ವಿಬುಧೇಶ ತಿರು। ವೆಂಗಳಪ್ಪ ಎನ್ನಪ್ಪನೆ ನಾರಾಯಣಾ ॥ ೧ ॥

**ಮಟ್ಟೆತಾಳ** ॥ ಉಟ್ಟ ದಟ್ಟಿ ಕಟ್ಟಿದ ಕಠಾರಿ। ತೊಟ್ಟಂಬು ತೊಡರು ತೋಮರಾ । ಮೆಟ್ಟಿದ್ದಾ ಹೆಕ್ಕಟ್ಟಗೆರೆ ಹೊನ್ನಗೆಜ್ಜೆ । ಕಟ್ಟಾಳು ತಾ ಆಳು ಯೆಟ್ಟೆವರಿವಲ್ಲಿ । ಸೃಷ್ಟಿರಕ್ಷಿಪ ಪುರಂದರವಿಠಲ ತಿರುವೆಂಗಳಪ್ಪನೇ ಆದಾ ॥ ೨ ॥

**ಅಟ್ಟತಾಳ** ॥ ಅಚ್ಯುತಾನಂತ ಗೋವಿಂದ ಮುಕುಂದ ವಾಮನ ವಾಸುದೇವ ನಾರಾಯಣ । ಸಚ್ಚಿದಾನಂದ ಸ್ವರೂಪ ಗೋಪಾಲ ಪುರುಷೋತ್ತಮ ಪರಂಧಾಮ ನಾರಾಯಣಾ । ಮಚ್ಛ ಕೂರುಮ ವರಾಹ ನಾರಸಿಂಹ ವಾಮನ ಭಾರ್ಗವ ರಾಘವ ಕೃಷ್ಣ ಬುದ್ಧ ಕಲ್ಕಿಯವತಾರ। ಅನಂತಾವ

ತಾರ ನಾರಾಯಣಾ । ಅಪ್ಪಾರಮಹಿಮನೆ ನಾರಾಯಣಾ ಸರ್ಪಶಯನನೆ ನಾರಾಯಣಾ । ಶ್ರೀಪುರಂದರವಿಠಲ ವಿಬುಧೇಶ ತಿರುವೆಂಗಳಪ್ಪ ಯೆನ್ನಪ್ಪನೆ ನಾರಾಯಣಾ ಅಚ್ಯುತಾನಂತ ಗೋವಿಂದ ॥ ೩ ॥

**ಝಂಪೆತಾಳ** ॥ ಇದೇ ದನುಜಮರ್ದನಚಕ್ರಹಸ್ತ । ಇದೇ ವೇದ ಮಯ ಶಂಖಹಸ್ತ । ಇದೇ ಜಘನದೊಳಿಪ್ಪ ಅಮೃತಹಸ್ತ । ಇದೇ ವೈಕುಂಠ ವೆಂದು ತೋರುವ ಹಸ್ತ । ಇದೇ ಪುರಂದರವಿಠಲನ್ನ ಮೂರುತಿ । ಇದೇ ತಿರುವೆಂಗಳಪ್ಪನ ಇರವೂ ॥ ೪ ॥

**ಏಕತಾಳ** ॥ ಕಿರೀಟ ಕುಂಡಲಧರನ್ನ ಕಂಡೆ । ವರಮಣಿಭೂಷ ಣನ್ನ ಕಂಡೆ । ಸಿರಿಯಿಪ್ಪ ವಕ್ಷಸ್ಥಳವನ್ನ ಕಂಡೆ । ವರಾಂಬರನ್ನ ಕಂಡೆ । ವರದೇಶನ್ನ ಕಂಡೆ । ಪುರಂದರವಿಠಲನ ಚೆಲುವರೇಯನ । ತಿರುವೆಂಗಳಪ್ಪನ ಇರವ ಕಂಡೆ ॥ ೫ ॥

**ಜತೆ** ॥ ಪುರಂದರವಿಠಲ ವಿಬುಧೇಶ । ತಿರುವೆಂಗಳಪ್ಪ ಯೆನ್ನಪ್ಪನೆ ಆದಾ ॥ ೬ ॥ ಶ್ರೀಃ ॥

## ೩. ನರಸಿಂಹಸುಳಾದಿ.

**ಧ್ರುವತಾಳ** ॥ ಅಂಜುವೆ ನಾ ನಿನ್ನ ಸಿಂಗದ ಮೊಗದನ್ನಾ । ಹೂಂ ಕರಿಸುವೆ ಮರದೊಮ್ಮೊಮ್ಮೆ ॥ ಅಂಜುವೆ ನಾ ನಿನ್ನ ಕಿವಿಯ ಮೇಳವಿಸಿ ಮೇಲೆ । ಕವಿದೆರಗುವೆ ಮರದೊಮ್ಮೊಮ್ಮೆ ॥ ಅಂಜುವೆ ನಾ ನಿನ್ನ ಕುಡಿ ದಾಡೆಗಳ ಕಿಡಿ । ಕಿಡಿಗೆದರಿಸುವೆ ಮರದೊಮ್ಮೊಮ್ಮೆ ॥ ಅಂಜುವೆ ನಾ ನಿನ್ನ ತೆರವಾಯಿದೆರದೂದ । ಗಹಗಹಿಸುವೆ ಮರದೊಮ್ಮೊಮ್ಮೆ ॥ ಅಂಜುವೆ ನಾ ನಿನ್ನ ಕೋಪಾಟೋಪಕ್ಕೆ । ಘುಡಿಘುಡಿಸುವೆ ಮರದೊಮ್ಮೊಮ್ಮೆ ॥ ಅಂಜುವೆ ನಾ ನಿನ್ನ ಸಿಂಗಾದ ಮೊಗದನ್ನ । ಹುಂಕರಿಸುವೆ ಮರದೊಮ್ಮೊಮ್ಮೆ ॥ ಅಂಜುವೆ ನಾ ನಿನ್ನ ಸಿರಿಮುದ್ದು ನರಸಿಂಹ । ಪುರಂದರವಿಠಲ ನೀನು ಮಾರಿ ದೈವವೆಂದು ॥ ೧ ॥

**ಝಂಪೆತಾಳ** ॥ ಅಗ್ನಿಯೊಳಗಿದ್ದು ದಾಹಕಶಕುತಿಯನೀವೆ । ವಾಯುವಿನಲ್ಲಿದ್ದು ಶೋಷಶಕುತಿಯನೀವೆ । ವರುಣನಲ್ಲಿದ್ದು ಕ್ಲೇದಶಕುತಿಯ ನೀವೆ । ನಾನಾವಸ್ತುವಿನಲ್ಲಿದ್ದು ಇಂಥ ನಾನಾ ಶಕುತಿಗಳನೀವೆ । ಆರು ಯೇನು ಘನ್ನಮಹಿಮರೊ ನೀನೆ ಪುರಂದರವಿಠಲಾ ॥ ೪ ॥

**ಏಕತಾಳ** ॥ ಕಂಡೆ ಕಂಡೆ ಕಮಲರಮಣನ । ಕಂಡೆ ಕಂಡೆ ಕಮ ಲಜನಯ್ಯನ । ಕಂಡೆ ಕಂಡೆ ಕೌಸ್ತುಭಧರನ । ಕಂಡೆ ಕಂಡೆ ವೈಜಯಂತಿ ಧರನ । ಕಂಡೆ ಕಂಡೆ ಚಕ್ರಪಾಣಿಯ । ಕಂಡೆ ಕಂಡೆ ಶಂಖಧರನ । ಕಂಡೆ ಕಂಡೆ ಕರುಣಾಳು ಪುರಂದರವಿಠಲನ ॥ ೫ ॥

**ಜತೆ** ॥ ಇನಿತು ಕಾರಣಮನಿತು ನೀನೆ । ನಿನಗೂ ಎನಗೂ ಪುರಂ ದರವಿಠಲಾ ॥ ೬ ॥ ಶ್ರೀಃ ॥

## ೨. ವೆಂಕಟೇಶಸುಳಾದಿ.

**ಧ್ರುವತಾಳ** ॥ ಮಂಗಳಾಂಗ ವಟ್ಟಿದಲ್ಲನಂಗಸುಖವಿತ್ತಳವ್ವೆ । ಅಂಗನೆ ಲಕುಮವ್ವೆ ತುಂಬುರದೊಳಿಪ್ಪಳವ್ವೆ । ಶೃಂಗಾರವಾದಳವ್ವೆ ಭಂಗಾ ರವಾದಳವ್ವೆ। ರಂಗ ಪುರಂದರವಿಠಲ ವಿಬುಧೇಶ ತಿರು। ವೆಂಗಳಪ್ಪ ಎನ್ನಪ್ಪನೆ ನಾರಾಯಣಾ ॥ ೧ ॥

**ಮಟ್ಟೆತಾಳ** ॥ ಉಟ್ಟ ದಟ್ಟಿ ಕಟ್ಟಿದ ಕಠಾರಿ । ತೊಟ್ಟಂಬು ತೊಡರು ತೋಮರಾ । ಮೆಟ್ಟಿದ್ದಾ ಹೆಕ್ಕಟ್ಟಿಗೆರೆ ಹೊನ್ನಗೆಜ್ಜೆ । ಕಟ್ಟಾಳು ತಾ ಆಳು ಯೆಟ್ಟಿವರಿವಲ್ಲಿ । ಸೃಷ್ಟಿರಕ್ಷಿಪ ಪುರಂದರವಿಠಲ ತಿರುವೆಂಗಳಪ್ಪನೇ ಆದಾ ॥ ೨ ॥

**ಅಟತಾಳ** ॥ ಅಚ್ಯುತಾನಂತ ಗೋವಿಂದ ಮುಕುಂದ ವಾಮನ ವಾಸುದೇವ ನಾರಾಯಣ । ಸಚ್ಚಿದಾನಂದ ಸ್ವರೂಪ ಗೋಪಾಲ ಪುರು ಷೋತ್ತಮ ಪರಂಧಾಮ ನಾರಾಯಣಾ । ಮಚ್ಛ ಕೂರುಮ ವರಾಹ ನಾರ ಸಿಂಹ ವಾಮನ ಭಾರ್ಗವ ರಾಘವ ಕೃಷ್ಣ ಬುದ್ಧ ಕಲ್ಕಿಯವತಾರ । ಅನಂತಾವ

ತಾರ ನಾರಾಯಣಾ । ಅಪ್ಪಾರಮಹಿಮನೆ ನಾರಾಯಣಾ ಸರ್ಪಶಯನನೆ ನಾರಾಯಣಾ । ಶ್ರೀಪುರಂದರವಿಠಲ ವಿಬುಧೇಶ ತಿರುವೆಂಗಳಪ್ಪ ಯೆನ್ನಪ್ಪನೆ ನಾರಾಯಣಾ ಅಚ್ಯುತಾನಂತ ಗೋವಿಂದ ॥ ೩ ॥

**ಝಂಪೆತಾಳ** ॥ ಇದೇ ದನುಜಮರ್ದನಚಕ್ರಹಸ್ತ । ಇದೇ ವೇದ ಮಯ ಶಂಖಹಸ್ತ । ಇದೇ ಜಘನದೊಳಿಪ್ಪ ಅವ್ಯಕ್ತಹಸ್ತ । ಇದೇ ವೈಕುಂಠ ವೆಂದು ತೋರುವ ಹಸ್ತ । ಇದೇ ಪುರಂದರವಿಠಲನ್ನ ಮೂರುತಿ । ಇದೇ ತಿರುವೆಂಗಳಪ್ಪನ ಇರವು ॥ ೪ ॥

**ಏಕತಾಳ** ॥ ಕಿರೀಟ ಕುಂಡಲಧರನ್ನ ಕಂಡೆ । ವರಮಣಿಭೂಷ ಣನ್ನ ಕಂಡೆ । ಸಿರಿಯಿಪ್ಪ ವಕ್ಷಸ್ಥಳವನ್ನ ಕಂಡೆ । ವರಾಂಬರನ್ನ ಕಂಡೆ । ವರದೇಶನ್ನ ಕಂಡೆ । ಪುರಂದರವಿಠಲನ ಚೆಲುವರೇಯನ । ತಿರುವೆಂಗಳಪ್ಪನ ಇರವ ಕಂಡೆ ॥ ೫ ॥

**ಜತೆ** ॥ ಪುರಂದರವಿಠಲ ವಿಬುಧೇಶ । ತಿರುವೆಂಗಳಪ್ಪ ಯೆನ್ನಪ್ಪನೆ ಆದಾ ॥ ೬ ॥ ಶ್ರೀಃ ॥

# ೨. ನರಸಿಂಹಸುಳಾದಿ.

**ಧ್ರುವತಾಳ** ॥ ಅಂಜುವೆ ನಾ ನಿನ್ನ ಸಿಂಗದ ಮೊಗದನ್ನಾ । ಹೂಂ ಕರಿಸುವೆ ಮರದೊಮ್ಮೊಮ್ಮೆ ॥ ಅಂಜುವೆ ನಾ ನಿನ್ನ ಕಿವಿಯ ಮೇಳವಿಸಿ ಮೇಲೆ । ಕವಿದೆರಗುವೆ ಮರದೊಮ್ಮೊಮ್ಮೆ ॥ ಅಂಜುವೆ ನಾ ನಿನ್ನ ಕುಡಿ ದಾಡೆಗಳ ಕಿಡಿ । ಕಿಡಿಗೆದರಿಸುವೆ ಮರದೊಮ್ಮೊಮ್ಮೆ ॥ ಅಂಜುವೆ ನಾ ನಿನ್ನ ತೆರವಾಯಿದೆರದೂದ । ಗಹಗಹಿಸುವೆ ಮರದೊಮ್ಮೊಮ್ಮೆ ॥ ಅಂಜುವೆ ನಾ ನಿನ್ನ ಕೋಪಾಟೋಪಕ್ಕೆ । ಘುಡಿಘುಡಿಸುವೆ ಮರದೊಮ್ಮೊಮ್ಮೆ ॥ ಅಂಜುವೆ ನಾ ನಿನ್ನ ಸಿಂಗಾದ ಮೊಗದನ್ನ । ಹುಂಕರಿಸುವೆ ಮರದೊಮ್ಮೊಮ್ಮೆ ॥ ಅಂಜುವೆ ನಾ ನಿನ್ನ ಸಿರಿಮುದ್ದು ನರಸಿಂಹ । ಪುರಂದರವಿಠಲ ನೀನು ಮಾರಿ ದೈವವೆಂದು ॥ ೧ ॥

**ರೂಪಕತಾಳ** ॥ ಹಿರಣ್ಯಕಶಿಪುವಿನುರವ ಬಗಿದು ಚೀರಲು । ಕರುಳವಮಾಲೆ ಕಿತ್ತು ಕೊರಳಲಿಕ್ಕಿದ ಬಳಿಕ । ಉರಿಯನುಗುಳುವೆ ಯೇತಕೇ। ಸಿರಿಯ ನುಡಿಸೆಯಾಕೆ। ಹರ ಬೊಮ್ಮಾದಿಗಳನ್ನು ಸರಕುಮಾಡೆ ಯಾಕೊ। ಸಿರಿಮುದ್ದು ನರಸಿಂಹ ಪುರಂದರವಿಠಲ । ಪ್ರಹಲ್ಲಾದದೇವ ಬಂದರಪ್ಪಿ ಮುದ್ದಾಡಿದೆ ಯೇಕೆ ॥ ೨ ॥

**ಮಟ್ಟೆತಾಳ** ॥ ಉರಿಸಾಗರಗಳ ಕುಡಿದು ನಾಲಿಗೆಯ ನೀಡಿ। ಚರಾಚರಗಳೆಲ್ಲ ಚಾಲುವರಿಯುತಲಿತ್ತು । ಬೊಮ್ಮಾಂಡ ಒಂದೇ ಸಿಡಿದುಹೋಗುತಲಿತ್ತು । ಬೊಮ್ಮ ಪ್ರಳಯ ಒಂದೆ ಆಗಿಹೋಗುತಲಿತ್ತು । ಸಿರಿಮುದ್ದು ನರಸಿಂಹ ಪುರಂದರವಿಠಲ । ಪ್ರಹ್ಲಾದದೇವ ಬಂದರಪ್ಪಿ ಮುದ್ದಾಡಿದೆ ಯೇಕೆ ॥ ೩ ॥

ಅಟತಾಳ ॥ ಅಟ್ಟಹಾಸಕಬುಜಭವಾಂಡಕಟ ಹಾಹಾ ಧ್ವನಿಯಿಡುತಿದೆ। ದಿಟ್ಟಿಪ್ರಭೆ ದಶದಿಕ್ಕು ಬೆಳಗುತಲಿದೆ। ಬೆಟ್ಟಗಳಿಳೆತಳಕೆಳಗಾಗುತಲಿದೆ । ದಿಟ್ಟದಿಗ್ಗಜ ಬೆದರುತ್ತಲಿದೆ। ದಿಟ್ಟ ಮುದ್ದು ನರಸಿಂಹ ಪುರಂದರ । ವಿಠಲ ನಿನಗಾರಿದಿರು ಜಗದೊಳು ॥ ೪ ॥

ಏಕತಾಳ ॥ ಹಿರಣ್ಯಕಶಿಪುವಿನುರವ ಬಗಿದು । ಸಾರಾಸವಾಡಿದಿರಾ ನೈ ಕೈ ಮುಟ್ಟಿ ॥ ಸಾರಾಸವಾಡಿದಿರಾ ಸಿರಿಮುದ್ದು ನರಸಿಂಹ । ಪುರಂದರ ವಿಠಲ ಸಾರಾಸವಾಡಿದಿರಾ ॥ ೫ ॥

ಜತೆ ॥ ಸಿರಿ ನರಸಿಂಹ ಜಯ ನರಸಿಂಹ ॥ ಸಿರಿಮುದ್ದು ಪುರಂದರ ವಿಠಲ ನರಸಿಂಹ ॥ ೬ ॥ ಶ್ರೀಃ ॥

## ೪. ಸುಳಾದಿ.

**ಧ್ರುವತಾಳ** ॥ ಗಲಭೆಯದೇನೋ ಬೊಮ್ಮಾದಿಗಳಾ । ಉಲುಹು ವದೇನೋ ರುದ್ರಾದಿಗಳಾ । ಸುಳಿಸದಿರೆಲೊ ಸನಕಾದಿಗಳಾ । ತೊಲಗ ಹೇಳೆಲೊ ಗರುಡಾದಿಗಳಾ । ಕುಳಿತರೆ ಹೊಯ್ಯೊ ಸುರಾದಿಗಳಾ । ನಿಲ

ಹೇಳೊ ಇಂದ್ರ ಚಂದ್ರಾದಿಗಳಾ । ನಳಿನಪತ್ರಾಕ್ಷನೋಲಗಶಾಲಿಗೆ । ಪಲುವರಿ ಲಿಂಗಶರೀರಗಳು । ಕಳಕಳದೊಳಗೆ ಲಕ್ಷ್ಮಿಮಿವೆರಸಿ । ಸುಲಭ ನೊಪ್ಪಿದ್ದ ಪುರಂದರಾವಿಠಲಯ್ಯ ॥ ೧ ॥

ತ್ರಿಪುಟತಾಳ ॥ ಮುಕುತ ವಿರಿಂಚ ವಿಹಂಗಪತಿಗಳ । ಉಕುತಿಗ ಳಿಂದ ತುತಿಸಿಕೊಂಬುದೆತ್ತಾ। ಆಕಳಕಾಯುವ ಗೋಪ ಗೊಲ್ಲತಿಯುರ। ಮಕ್ಕಳ ಕೈಯಿಂದ ಅಟ್ಟಿಸಿಕೊಂಬುದೆತ್ತ । ಮಕ್ಕಳ ಕೈಯಿಂದ ಬೈಸಿಕೊಂಬುದೆತ್ತ। ಸಕಲ ಸುರರು ನಗರೆ ರಂಗಯ್ಯ ತಕ್ಕವಾಡೊ ಪುರಂದರವಿಠಲಾ ॥ ೨ ॥

ಅಟತಾಳ ॥ ಬಂಧೂಗೆ ಒಲಿದು ಕಡಹದ ಮರನೇರಿ ಕಾ। ಳಿಂ ದೀಗೆ ಧುಮುಕಿ ಕಾಳಿಂಗನ ಹೆಡೆಯಲ್ಲಿ । ಧಂ ಧಂ ಧಂ ಧಂ ಧಿಮಿಕೆಂದು ಬೊಮ್ಮ ಮದ್ದಳೆ ಮುಟ್ಟೆ । ನಂದೀವಾಹನ ತಾಳವಿಡಿದು ತತ್ಥಾ ಯೆನ್ನೆ । ತಂದನಾ ಯೆಂದು ಹನುಮಂತನು ಪಾಡೆ । ಅಂದಾವಗೊಡಿದು ಪುರಂದರಾ ವಿಠಲ । ನಂದಾನ ಕಂದನಾಡಿದ ಆನಂದದಿಂದಾ ॥ ೩ ॥

ಏಕತಾಳ ॥ ಪಂಕಜಲೋಚನ ಪಂಕಜಾನನ । ಪಂಕಜಸಂಭವ ವಂದಿತಾಂಘ್ರಿ । ಪಂಕಜಪಾಣಿ ಪಂಕಜಮಿತ್ರ ಅನಂತಕೋಟಿತೇಜ। ಪಂಕ ಜನಾಭ ಪುರಂದರವಿಠಲ ॥ ೪ ॥

ಆದಿತಾಳ ॥ ಚತುರ್ಭುವಾ ಚತುರ್ಭುಜಮೂರುತಿ ಚತುರಾತು ಮ । ಚತುರಾನನಾದಿ ದೇವರಿಗೊಡೆಯಾ । ಚತುರ್ಯುಗ ಚತುರ್ವಿಧ ಮುಕುತಿದಾಯಕ । ಪುರಂದರವಿಠಲ ಚತುರ್ಮುಖವಂದ್ಯ ॥ ೫ ॥

ಜತೆ ॥ ಅಂದುಂಟು ಇಂದಿಲ್ಲ ಯೆನಬೇಡಿ ಜಗದೊಳು। ಬಂದಾಡು ತೈದಲಿ ಪುರಂದರವಿಠಲ ॥ ೬ ॥ ೨೧ ॥

## ೫. ಸುಳಾದಿ.

ಧ್ರುವತಾಳ ॥ ಹುಟ್ಟುವ ಭೀತಿ ಹೊಂದುವ ಭೀತಿ । ವಿಟ್ಠಲ ನಂಘ್ರಿ ನೆನೆಯದವಗೆ । ಕಾಲನ ಭೀತಿ ಕರ್ಮದ ಭೀತಿ ಗೋ। ಪಾಲನ

ದಾಸನಾಗದವಗೆ ॥ ಅರಿಷಡ್ವರ್ಗದ ಮಹಾಭೀತಿ ಶ್ರೀ। ಹರಿನಾಮ ಪುಚ್ಚರಿಸ
ದವಗೆ । ಹಲವು ಮಾತಿನ್ನೇನು ಹಲವು ಭೀತಿ । ಶ್ರೀಪುರಂದರವಿಠಲನ
ಪೂಜಿಸದವಗೆ ॥ ೧ ॥

**ಮಟ್ಟೆತಾಳ** ॥ ನಿನ್ನ ದಿವ್ಯನಾಮ ಸುಧಾಂಬುಧಿಯಲ್ಲಿ । ಮನವು
ಮುಳುಗಿಪ್ಪ ಮಹಾ ಮಹಾಂತರಾ । ನಿನ್ನ ದಿವ್ಯ ಚಿನುಮಾತ್ರಮೂರುತಿಯ ।
ಅನುಭವಿಸುವಾನಂದಭರಿತರಾ । ಅನುದಿನ ಅವರೊಳಿರಿಸೆನ್ನ । ಘನಮಹಿಮ
ಪುರಂದರವಿಠಲ ವಿಭುವೆ ॥ ೨ ॥

**ತ್ರಿಪುಟತಾಳ** ॥ ನೀಲ ಘನಶ್ಯಾಮ ಕೋಮಲಾಂಗನ ಕಂಡೂ ।
ಅವ್ವ ಅವ್ವಾ ಯೆಂತು ಸಿಲ್ಲಬಹುದೆ। ಇನ್ನೆಂತು ಸೈರಿಪೆನೆ ಆರಾದಡೇನಾದ
ಡೆನ್ನಾ। ಲೆನ್ನನು ಪುರಂದರವಿಠಲನ್ನ ಅಪ್ಪಿದೆನವ್ವ ॥ ೩ ॥

**ಅಟತಾಳ** ॥ ಮಂಗಳಮಯ ವಿಷ್ಣು। ವಾಮನಾ ವಿಷ್ಣು ವಾಮನಾ।
ಗಂಗಾಪಿತ ಹರಿಯೆ ಯೆನ್ನಲೆನ್ನ। ಕಂಗಳಲ್ಲಿ ಜಲವುಕ್ಕುವದೂ । ಅಂಗಪುಳ
ಕಾಂಕವೆಂದಪ್ಪುದೆನ್ನ। ಕಂಗಳಲ್ಲಿ ಜಲವುಕ್ಕುವದೂ। ಪುರಂದರವಿಠಲನಂಘ್ರಿ
ಭಜಕನೆಂದು । ಕಂಗಳಲ್ಲಿ ಜಲವುಕ್ಕುವದೂ ॥ ೪ ॥

**ಆದಿತಾಳ** ॥ ಮಂದರಧರನ ಮರೆಹೊಕ್ಕು ಬದುಕುವೆನೆ। ಇಂದು
ನಾಳೆ ನಾಡಿಪ್ಪೆಂಬ ಮಂದಮತಿಗಿನ್ನೇನೆಂಬೆ । ಹಿಂದೆ ಮುಂದೆ ಸುತ್ತಿ ಬಕ್ಕ
ಮೃತ್ಯು ವಿಚಾರಿಸದೆ। ತಂದಂದು ಕೆಡಹುತಲಿದೆ ಭವಾಂಬುಧಿಯಲ್ಲಿ। ತಂ
ದೆನಿಂದು ಪರಿಯಂತ ಈ ಬೆಂಡ ಮನದ ದೀಪ್ತಿಯು । ತಂದೆ ಕರುಣಿಸೇಲೆ
ಪುರಂದರವಿಠಲ ವಿಭುವೇ ॥ ೫ ॥

**ಜತೆ** ॥ **ಮಾರರಮಣಾ** ಭೂರಮಣಾ ಪುರಂದರವಿಠಲಾ । ಸಾರ್ವ
ಭೌಮ ರಮಾರಮಣ ॥ ೬ ॥ ಶ್ರೀಃ ॥

# ೬. ವ್ಯಾಸರಾಯರ ಸುಳಾದಿ.

**ಧ್ರುವತಾಳ** ॥ ವ್ಯಾಸರಾಯರ ಚರಣಕಮಲ ದರುಶನವೆನಗೆ ।
ಯೇಸು ಜನ್ಮದ ಸುಕೃತಫಲದಿ ದೊರಕಿತೋ ಯೆನ್ನ । ಸಾಸಿರ ಕುಲಕೋಟಿ

ಪಾವನ್ನವಾಯಿತು । ಶ್ರೀಶನ ಭಜಿಸುವಡಧಿಕಾರಿ ನಾನಾದೆ । ದೋಷವಿರಹಿತನಾದ ಪುರಂದರಾವಿಠಲನ್ನ । ದಾಸರಾ ಕರುಣವು ಯೆನವನ್ಯಾಲೆ ಇರಲಾಗಿ ॥ ೧ ॥

**ಮಟ್ಟೆತಾಳ** ॥ ಗುರುವುಪದೇಶವಿಲ್ಲದಾ ಮಂತ್ರ । ಗುರುವುಪದೇಶವಿಲ್ಲದಾ ಭಕ್ತಿ । ಗುರುವುಪದೇಶವಿಲ್ಲದಾ ಕ್ರಿಯೆಗಳು । ಉರಗನಾ ವುಷವಾಸದಂತೆ ಕಾಣಿರೋ ॥ ಗುರುವ್ಯಾಸರಾಯರ ವರವೆಂದೆನಿಸಿ । ವರಮಹಾಮಂತ್ರವುಪದೇಶಿತಾನಾಗಿ । ಪುರಂದರವಿಠಲ ಪರನೆಂದೆನಿಸಿ । ದುರಿತಭಯಗಳೆಲ್ಲ ಪರಿಹರಿಸಿದನಾಗಿ ॥ ೨ ॥

**ರೂಪಕತಾಳ** ॥ ಅಂಕಿತವಿಲ್ಲದ ದೇಹ ನಿಷಿದ್ಧ । ಅಂಕಿತವಿಲ್ಲದ ಕಾಯ ಶೋಭಿಸಾದು ॥ ಅಂಕಿತವಿಲ್ಲದೆ ಇರಬಾರದೆಂದು ಎನಗೆ ಚ । ಕ್ರಾಂಕಿತವನು ಮಾಡಿ ಯೆನಗೆ ॥ ಪಂಕಜನಾಭ ಪುರಂದರವಿಠಲನ್ನ । ಅಂಕಿತ ವೆನಗಿತ್ತ ಗುರುವ್ಯಾಸಮುನಿರಾಯಾ ॥ ೩ ॥

**ಝಂಪೆತಾಳ** ॥ ನ್ಯಾಯಾಮೃತ ತರ್ಕ ತಾಂಡವ ಚಂದ್ರಿಕೆ ಮೊದಲಾದ । ನ್ಯಾಯಗ್ರಂಥಗಳ ರಚಿಸಿ ತನ್ನಯ ಭಕ್ತರಿಗಿತ್ತೆ । ಮಾಯಾವಾದಿ ಮೊದಲಾದ ಇಪ್ಪತ್ತೊಂದು ಕುಭಾಷ್ಯದವರಾ । ಬಾಯ ಮುಚ್ಚಿಸಿದೆ ಮಧ್ವರಾಯರ ಕರುಣದಿಂದ ಸಿರಿಯರಸ ಪುರಂದರಾವಿಠಲನ್ನ ಭಕ್ತರೊಳು । ನಾಯಕನೆನಿಸಿಕೊಂಡೆ ರಾಯ ಗುರುವ್ಯಾಸಮುನಿಯೆ ॥ ೪ ॥

**ತ್ರಿಪುಟತಾಳ** ॥ ಶೇಷಾವೇಶ ಪ್ರಹ್ಲಾದ ಅವತಾರನೆನಿಸಿದೆ । ವ್ಯಾಸರಾಯರೆಂಬೊ ಪೆಸರು ನೀನಾಂತೆ । ದೇಶಾಧಿಪಗೆ ಬಂದ ಕುಹುಯೋಗವನು ನೂಕಿ ನೀ ಸಿಂ । ಹಾಸನವೇರಿ ಮೆರೆದೆ ಜಗವರಿಯೆ । ವ್ಯಾಸಾಬ್ಧಿಯನೆ ಕಟ್ಟಿಸಿ ದೇಶದಾ ವೊಳಗೆಲ್ಲ । ಭೂಸುರಕೀರ್ತಿಯನು ಪಡದೆ ಗುರುರಾಯಾ । ವಾಸುದೇವ ಪುರಂದರವಿಠಲನ್ನ ದಾಸರೊಳು ಹೆಗ್ಗಳ ಯೆನಿಸಿಕೊಂಡೆ ॥ ೫ ॥

**ಅಟತಾಳ** ॥ ಶ್ರೀನಾರಾಯಣ ಯೋಗಿಯಾದ ಶ್ರೀಪಾದರಾಯರೊಳು ವಿಹಿತವಾದ ವಿದ್ಯಾಭ್ಯಾಸವ ಮಾಡಿದೆ । ನೀನು ಧರೆಯೊಳು ವಿಜಯೀಂದ್ರ ವಾದಿರಾಜರೆಂಬೊ ಪರಮ ಶಿಷ್ಯರ ಪಡದು ಮೆರದೆ

ದಾಸನಾಗದವಗೆ ॥ ಅರಿಷಡ್ವರ್ಗದ ಮಹಾಭೀತಿ ತ್ರೀ । ಹರಿನಾಮ ಪುಚ್ಚರಿಸ ದವಗೆ । ಹಲವು ವ್ಯಾತಿನ್ನೇನು ಹಲವು ಭೀತಿ । ಶ್ರೀಪುರಂದರವಿಠಲನ ಪೂಜಿಸದವಗೆ ॥ ೧ ॥

**ಮಟ್ಟೆತಾಳ** ॥ ನಿನ್ನ ದಿವ್ಯನಾಮ ಸುಧಾಂಬುಧಿಯಲ್ಲಿ । ಮನವು ಮಗಿಪ್ಪ ಮಹಾ ಮಹಾಂತರಾ । ನಿನ್ನ ದಿವ್ಯ ಚಿನುಮಾತ್ರಮೂರುತಿಯ । ಅನುಭವಿಸುವಾನಂದಭರಿತರಾ । ಅನುದಿನ ಅವರೊಳಿರಿಸೆನ್ನ । ಘನಮಹಿಮ ಪುರಂದರವಿಠಲ ವಿಭುವೆ ॥ ೨ ॥

**ತ್ರಿಪುಟತಾಳ** ॥ ನೀಲ ಘನಶ್ಯಾಮ ಕೋಮಲಾಂಗನ ಕಂಡೂ । ಅವ್ವ ಅವ್ವಾ ಯೆಂತು ನಿಲ್ಲಬಹುದೆ । ಇನ್ನೆಂತು ಸೈರಿಪೆನೆ ಆರಾದಡೇನಾದ ಡೆನ್ನಾ । ಲೆನ್ನನು ಪುರಂದರವಿಠಲನ್ನ ಅಪ್ಪಿದೆನವ್ವ ॥ ೩ ॥

**ಅಟತಾಳ** ॥ ಮಂಗಳಮಯ ವಿಷ್ಣು । ವಾಮನಾ ವಿಷ್ಣು ವಾಮನಾ । ಗಂಗಾಪಿತ ಹರಿಯೆ ಯೆನ್ನಲೆನ್ನ । ಕಂಗಳಲ್ಲಿ ಜಲವುಕ್ಕುವದೂ । ಅಂಗವುಳ ಕಾಂಕವೆಂದಪ್ಪುದೆನ್ನ । ಕಂಗಳಲ್ಲಿ ಜಲವುಕ್ಕುವದೂ । ಪುರಂದರವಿಠಲನಂಘ್ರಿ ಭಜಕನೆಂದು । ಕಂಗಳಲ್ಲಿ ಜಲವುಕ್ಕುವದೂ ॥ ೪ ॥

**ಆದಿತಾಳ** ॥ ಮಂದರಧರನ ಮರೆಹೊಕ್ಕು ಬದುಕುವೆನೆ । ಇಂದು ನಾಳೆ ನಾಡಿಷ್ಟೆಂಬ ಮಂದಮತಿಗಿನ್ನೇನೆಂಬೆ । ಹಿಂದೆ ಮುಂದೆ ಸುತ್ತಿ ಬಕ್ಕ ಮೃತ್ಯು ವಿಚಾರಿಸದೆ । ತಂದಂದು ಕೆಡಹುತಲಿದೆ ಭವಾಂಬುಧಿಯಲ್ಲಿ । ತಂದೆನಿಂದು ಪರಿಯಂತ ಈ ಬೆಂಡ ಮನದ ದೀಪ್ತಿಯ । ತಂದೆ ಕರುಣಿಸಲಿ ಪುರಂದರವಿಠಲ ವಿಭುವೇ ॥ ೫ ॥

**ಜತೆ** ॥ ಮಾರಮಣಾ ಭೂರಮಣಾ ಪುರಂದರವಿಠಲಾ । ಸಾರ್ವಭೌಮ ರಮಾರಮಣ ॥ ೬ ॥ ಶ್ರೀಃ ॥

## ೬. ವ್ಯಾಸರಾಯರ ಸುಳಾದಿ.

**ಧ್ರುವತಾಳ** ॥ ವ್ಯಾಸರಾಯರ ಚರಣಕಮಲ ದರುಶನವೆನಗೆ । ಯೇಸು ಜನ್ಮದ ಸುಕೃತಫಲದಿ ದೊರಕಿತೋ ಯೆನ್ನ । ಸಾಸಿರ ಕುಲಕೋಟಿ

ಪಾವನ್ನವಾಯಿತು । ಶ್ರೀಶನ ಭಜಿಸುವಡಧಿಕಾರಿ ನಾನಾದೆ । ದೋಷವಿರಹಿತನಾದ ಪುರಂದರಾವಿಠಲನ್ನ । ದಾಸರಾ ಕರುಣವು ಯೆನವ್ಯಾಲೆ ಇರಲಾಗಿ ॥ ೧ ॥

**ಮಟ್ಟೆತಾಳ** ॥ ಗುರುವುಪದೇಶವಿಲ್ಲದಾ ಮಂತ್ರ । ಗುರುವುಪದೇಶವಿಲ್ಲದಾ ಭಕ್ತಿ । ಗುರುವುಪದೇಶವಿಲ್ಲದಾ ಕ್ರಿಯೆಗಳು । ಉರಗನಾ ವುಪವಾಸದಂತೆ ಕಾಣಿರೋ ॥ ಗುರುವ್ಯಾಸರಾಯರ ವರವೆಂದೆನಿಸಿ । ವರಮಹಾಮಂತ್ರವುಪದೇಶಿತನಾಗಿ । ಪುರಂದರವಿಠಲ ಪರನೆಂದೆನಿಸಿ । ದುರಿತಭಯಗಳೆಲ್ಲ ಪರಿಹರಿಸಿದನಾಗಿ ॥ ೨ ॥

**ರೂಪಕತಾಳ** ॥ ಅಂಕಿತವಿಲ್ಲದ ದೇಹ ನಿಷಿದ್ಧ । ಅಂಕಿತವಿಲ್ಲದ ಕಾಯ ಶೋಭಿಸಾದು ॥ ಅಂಕಿತವಿಲ್ಲದೆ ಇರಬಾರದೆಂದು ಎನಗೆ ಚ । ಕ್ರಾಂಕಿತವನು ಮಾಡಿ ಯೆನಗೆ ॥ ಪಂಕಜನಾಭ ಪುರಂದರವಿಠಲನ್ನ । ಅಂಕಿತವೆನಗಿತ್ತ ಗುರುವ್ಯಾಸಮುನಿರಾಯಾ ॥ ೩ ॥

**ಝಂಪೆತಾಳ** ॥ ನ್ಯಾಯಾಮೃತ ತರ್ಕ ತಾಂಡವ ಚಂದ್ರಿಕೆ ಮೊದಲಾದ । ನ್ಯಾಯಗ್ರಂಥಗಳ ರಚಿಸಿ ತನ್ನಯ ಭಕ್ತರಿಗಿತ್ತೆ । ಮಾಯಾವಾದಿ ಮೊದಲಾದ ಇಪ್ಪತ್ತೊಂದು ಕುಭಾಷ್ಯದವರಾ । ಬಾಯ ಮುಚ್ಚಿಸಿದೆ ಮಧ್ವರಾಯರ ಕರುಣದಿಂದ ಸಿರಿಯರಸ ಪುರಂದರಾವಿಠಲನ್ನ ಭಕ್ತರೊಳು । ನಾಯಕನೆನಿಸಿಕೊಂಡೆ ರಾಯ ಗುರುವ್ಯಾಸಮುನಿಯೆ ॥ ೪ ॥

**ತ್ರಿಪುಟತಾಳ** ॥ ಶೇಷಾವೇಶ ಪ್ರಹ್ಲಾದ ಅವತಾರನೆನಿಸಿದೆ । ವ್ಯಾಸರಾಯರೆಂಬೊ ಪೆಸರು ನೀನಾಂತೆ । ದೇಶಾಧಿಪಗೆ ಬಂದ ಕುಹುಯೋಗವನು ನೂಕಿ ನೀ ಸಿಂ । ಹಾಸನವೇರಿ ಮೆರೆದೆ ಜಗವರಿಯೆ । ವ್ಯಾಸಾಬ್ಧಿಯನೆ ಕಟ್ಟಿಸಿ ದೇಶದಾ ವೊಳಗೆಲ್ಲ । ಭೂಸುರಕೀರ್ತಿಯನು ಪಡದೆ ಗುರುರಾಯಾ । ವಾಸುದೇವ ಪುರಂದರವಿಠಲನ್ನ ದಾಸರೊಳು ಹೆಗ್ಗಳ ಯೆನಿಸಿಕೊಂಡೆ ॥ ೫ ॥

**ಅಟತಾಳ** ॥ ಶ್ರೀನಾರಾಯಣ ಯೋಗಿಯಾದ ಶ್ರೀಪಾದರಾಯರೊಳು ವಿಹಿತವಾದ ವಿದ್ಯಾಭ್ಯಾಸವ ಮಾಡಿದೆ । ನೀನು ಧರೆಯೊಳು ವಿಜಯಿಾಂದ್ರ ವಾದಿರಾಜರೆಂಬೊ ಪರಮ ಶಿಷ್ಯರ ಪಡದು ಮೆರದೆ

ಕೀರ್ತಿಯಾ। ಯೆಲ್ಲ ಸುರೇಂದ್ರಪುತ್ರ ಭಿಕ್ಷವ ಬೇಡಿ ವಿಜಯೀಂದ್ರನಾ ಕರು ಣಿಸಿದವನನುದ್ಧರಿಸಿದ ಕಾರಣ। ಗುರುವ್ಯಾಸರಾಯರು ಪರಮ ಗುರುಗಳು ಪುರಂದರವಿಠಲನೆ ಪರದೈವ ಕಾಣಿರೋ ॥ ೬ ॥

**ಆದಿತಾಳ** ॥ ಮಾನಸಪೂಜೆಯನ್ನು ಮಾಡಿ । ದಾನವಾಂತಕ ರಂಗನ್ನ ಮೆಚ್ಚಿ। ತಾನೆ ಬಂದು ಗೋಪಾಲಕೃಷ್ಣನ ॥ ಯೇನೆಂದು ಧ್ಯಾನಿ ಪೆನೋ। ಯೇನೆಂದು ಪೇಳುವೆ ನಿಮ್ಮ ಮಹಿಮೆಯ। ಜ್ಞಾನಿಗಳರಸ ವ್ಯಾಸ ಮುನಿರಾಯಾ ॥ ಹೀನಜನರು ನಿನ್ನ ಮಾನವನೆಂದು । ನಾನಾ ನರಕಕ್ಕೆ ಉರುಳುವಾರು। ಶ್ರೀನಿವಾಸ ಪುರಂದರವಿಠಲನ್ನ ॥ ಆನಂದದಿಂದಲಿ ನಿನ್ನ ಮುಂದೆ। ಗಾನವ ಮಾಡುತ್ತ ಆಡುತ್ತಲಿಪ್ಪನು । ಯೇನು ಮಹಿಮೆಯೋ ದಾವ ಬಲ್ಲನೊ ॥ ೩ ॥

**ಏಕತಾಳ** ॥ ಈಸುಮುನಿಗಳಿಷ್ಟೇನು ಮಾಡಿದರು ನಮ್ಮ । ವ್ಯಾಸ ಮುನಿ ಮಧ್ವಮತವನುದ್ಧರಿಸಿ। ಕಾಶಿಗದಾಧರಮಿಶ್ರನ ಸೋಲಿಸಿ। ದಾಸನ ಮಾಡಿಕೊಂಡೆ ಧಾರುಣಿಯೊಳಗೆ । ಕಾಶಿಮಿಶ್ರವಕ್ಷ್ನಾಧಾರ ವಾಸುದೇವಾ। ವಾಲಿಲೇಯ ನಾರಸಿಂಹ ಯೋಗಿ ಲಿಂಗಣ। ಮಿಶ್ರನೇ ಮೊದಲಾದ ವಿದ್ವಾಂ ಸರು। ನೂರೆಂಟು ಜಯಜಯ ಪತ್ರಿಕೆಯನ್ನ । ವಾಸುದೇವ ಗೋಪಾಲ ಕೃಷ್ಣನಿಗೆ। ಭೂಷಣವ ಮಾಡಿ ಹಾರಿಸಿದೆ। ಶ್ರೀಶಾ ಪುರಂದರವಿಟ್ಟಲನೆ . ಈಶ ಯೆಂಪಾ ಬ್ರಹ್ಮಾದಿಗಳಿಗೆ । ಈಶನೆಂದು ಡಂಗುರಹೊಯ್ಸಿ ಮೆರದೆ ಜಗ ದೊಳಗೆ ॥ ೮ ॥

**ಜತೆ** ॥ ..........................................................

..........................................................................

## ೭. ಸುಳಾದಿ.

**ಧ್ರುವತಾಳ** ॥ ಮನೆಮನೆವಾರ್ತೆಯ ಕೋಟಲೆಯ ಹೊಯ್ಲಿನಲಿ ಕೆಲವು ಹೊತ್ತು ಹೋಯಿತು। ವನಿತಾವಿಷಯಾದಿಗಳ ಭೋಗದ ತಂಪಿನಲಿ

ಕೆಲವು ಹೊತ್ತು ಹೋಯಿತು । ಕುಜನರ ನುಡಿಗೇಳಿ ವಿಷದ ಘಾಯದ ನೋವಿನಲಿ ಕೆಲವು ಹೊತ್ತು ಹೋಯಿತು । ಜನರಾ ಭಯದಿ ಕರ್ಮವಾ ಮಾಡುವ ಜಾಗಿನಲಿ ಕೆಲವು ಹೊತ್ತು ಹೋಯಿತು । ಘನಸುಷುಪ್ತಿಯು ದುಃಖ ದೆಶೆಗಳಿಂದ ಜನುಮವೆಲ್ಲ ವ್ಯರ್ಥವಾಯಿತು । ಅನಂತಭವ ಬರಿದಾಯಿತು ಮುಂದಣಾ ಜನುಮಗಳನು । ಇನ್ನಾದಡು ನೆನವಾ ದಿನ ಒಂದನೆ ಕೊಡಲಾಗದೆ ಯೆನಗೆ ಗುರುಪುರಂದರಾವಿಠಲಾ ॥ ೧ ॥

**ಮಟ್ಟೆತಾಳ** ॥ ಲೇಸು ದೊರಕುವ ಚಿಂತೆ ದೊರಕಿತು । ಸಂತೋಷ ಮೋಸಗಳ ಹೆದರಾದ ದುಃಖ ಬಂದೊದಗಿತು । ದುಃಖ ತೊಲಗಬೇಕೆಂಬ ಚಿಂತೆ ದೊರಕಿತು । ಸಂತೋಷ ಮೋಸಗಳ ಹೆದರಾದ ಒಳ್ಳಿತಾದ । ಭೀತಿ ಅನುದಿನ ಅನುಭವಿಸಲಾರೆ । ಯೆನ್ನ ಮನದಲ್ಲಿ ಸಂದಣಿಸಿಯೊಳಗಿಪ್ಪ ಗುರು ಪುರಂದರವಿಠಲ ॥ ೨ ॥

**ತ್ರಿಪುಟೆತಾಳ** ॥ ಎನ್ನಿಂದುತ್ತುಮರಲಿ ಹಗೆಗೊಂಬೆನು । ಎನ್ನ ಸಮಾನರೊಳು ಮತ್ಸರ ಮಾಡುವೆ । ಎನ್ನಿಂದ ಹೀನರ ಕಂಡರೆ ಅನೇಕ ಪರಿಯಲಿ ನಗುವೆನ್ನುಡಿವೆ ದುನ್ನಂವಾಡುವೆ । ಇನಿತವಗುಣಗಣವವನೊ ನಿನ್ನವನೆಂದು ಸಲಹೊ ಗುರು ಪುರಂದರವಿಠಲ ॥ ೩ ॥

**ಅಟೆತಾಳ** ॥ ನಡೆಯುಡಗಿ ತುಟಿಯೊಣಗಿ ಕುಜನರಾ ಪೊಗಳಿ । ಅಘೆಗೊಳಗಾಗಿ ಘಳಿಸಿತಂದು ಅನುದಿನವು ಈ ತನುಗಳ । ತನುಸಂಬಂಧಿಯು ಪೊರೆದು । ಪರವ ಮರದೆನಯ್ಯ ಆಗಡಗೊಂಡು ಯಿರಾಗಡತನದಲಿ। ಆಗಡ ಕರಸಿ ಹಾವಿಗೆ ಹಾಲೆರೆದಂತಾಯಿತು ಗುರು ಪುರಂದರವಿಠಲಾ ॥ ೪ ॥

**ಆದಿತಾಳ** ॥ ಮನೆಮನೆವಾರ್ತೆಯಾ ಡೊಂಕ ತಿದ್ದುವೆನೆಂದು । ಅನವರತವು ಕೋಟಲೆಗೊಳುತಿದೆನಾಗಿ । ಮನವೆ ಡೊಂಕಾಯಿತಲ್ಲದೆ ಯೆನ್ನ ಮನದ ಡೊಂಕು । ಇನ್ನೆಂತು ತಿದ್ದಿಪೆನಯ್ಯ । ಯೆನ್ನ ಮನದ ಡೊಂಕಿಗೆ ನಿನ್ನ ಚರಣವ ನಿಲಿಸಿ । ಸನ್ನುತವ ಮಾಡು ಗುರು ಪುರಂದರವಿಠಲ ॥ ೫ ॥

**ಜತೆ** ॥ ಹಂಸು ನೆನವೆ ನರಹರಿಯು ನೆನವೆ । ಗುರು ಪುರಂದರ ವಿಠಲನ ಚರಣವ ನೆನವೆ ॥ ೬ ॥ ಶ್ರೀ ॥

# ೮. ಸುಳಾದಿ.

**ಧ್ರುವತಾಳ** ॥ ತಾಯಿ ಲಕ್ಷುಮಿ ತಂದೆ ವಿಠಲ। ದಾಯಿಗ ಚತುರಾನನ ವಾಯುಉ ಅನುಜರಕ್ಷಕ ಮನ । ಹಾಯಿಗಳು ದೇವತೆಗಳು । ಪಾಯು ಅವಸ ಮನೆದೊತ್ತು ರಘು। ರಾಯನ ಡಿಂಗರಿಗರ ಚತುರದಶ ಭುವನದೊಳು । ಪರಾಪೇಕ್ಷಿಗಳಿಂತಲ್ಲದೆ ಪುರಂದರವಿಠಲ । ರೇಯು ನಾ ನಿನ್ನ ಶರಣರ ಭಾಗ್ಯ ಇನ್ನೆಂತುಟೊ ॥ ೧ ॥

**ಮಟ್ಟೆತಾಳ** ॥ ಒಡಲು ಗುಡುಗುವನಕ ಸಾಮುಸುಧೆಯ ಸವಿವದು; ಪಡವರು ಮುಕುತಿಯ ತಡವರು ಭವಸಿಂಧುವ । ಒಡೆಯ ಮುಕುಂದನ ಒಡನಾಡಿಸಿ ತೋರ್ಪರು। ಮೃಡಸಖ ಪುರಂದರವಿಠಲನಾ ನಿಜದಾಸರೂ ॥ ೨ ॥

**ಅಟತಾಳ** ॥ ನಿನ್ನನೆ ಪಾಡುವೆ ನಿನ್ನನೆ ಪೊಗಳುವೆ । ನಿನ್ನನೆ ಬೇಡಿ ಬೇಸರಿಸುವೆ ॥ ರಂಗಯ್ಯ ನಿನ್ನನೆ ಕಾಡುವೆ ನಿನ್ನ ಕಾಲ ಪಿಡಿವೆ। ನಿನ್ನ ತಂಬುಲಿಕೆ ಕೈಯಾನುವೆ ರಂಗಯ್ಯ ॥ ನಿನ್ನಂತೆ ಸಾಕಬಲ್ಲ ಸ್ವಾಮಿ ಮತ್ತುಂಟೆ ದೇವಾ। ನಿನ್ನಾಣೆ ಪುರಂದರವಿಠಲ ದಮ್ಮಯ್ಯ ॥ ೩ ॥

**ಝಂಪೆತಾಳ** ॥ ಅಚ್ಯುತನ ಭಕುತಿಗಾವನು ಚಿತ್ತ ಮೆಚ್ಚದವ ಪಾಪಿಯಲ್ಲವೆ । ಅವನೊಳಾಡೆ ನೋಡೆ ನುಡಿಸೆ । ಅವ ಅವ ಮನುಜವೇಷದ ರಕ್ಕಸ। ಪುರಂದರವಿಠಲನ ತೊತ್ತಿನ ತೊತ್ತಿನ ಮಗನೊಳಲ್ಲವೆ ॥ ೪ ॥

**ಏಕತಾಳ** ॥ ಎನ್ನಾಳಿದಡೆನ್ನಾ ಹರಿ ನಿನ್ನ ನಿನ್ನವರೆ ನಿನಗೆ ನಗುವರು। ಎನ್ನಾಳ್ದ ನೀಸಾದೆ ಚೆನ್ನ ಸಿರಿಪುರಂದರವಿಠಲ ರಾಯ। ಯೆನ್ನಾಳುವ ತಂದೆತಾಯಿ ಬಂಧುಬಳಗ ಸಕಲವೆಲ್ಲವು ನೀನೆ। ಸಿಂಧುಶಾಯಿ ಪುರಂದರ ವಿಠಲರಾಯ ॥ ೫ ॥

**ಜತೆ** ॥ ಉಭಯಕಾವೇರಿ ಚಂದ್ರಪುಷ್ಕರಿಣಿ। ಪ್ರಭು ರಂಗ ಪುರಂದರವಿಠಲರಾಯಾ ॥ ೬ ॥ ಶ್ರೀಃ ॥

## ೯. ಸುಳಾದಿ.

**ಧ್ರುವತಾಳ** ॥ ರತಿಪತಿಪಿತನೆಂಬ ಚೆಲುವನುಳಿದು । ಈ ವರಹ ನೆಂಬೊ ಬಹುರೂಪು ಹರಿ ಶಿರಿ ಭೂಸತಿಯಾಗಿರಲು । ಅಡವಿಯೊಳಹ ಕರಡಿಯು ಮಗಳಿಗೆ ಮೆಚ್ಚುವರೆ । ಯೇ ಪುರಾಣಪುರುಷೋತ್ತಮನೆ ಅಮೃತಕೆ ನಾರಾಯಣಿಯಾಗಿ ಮೋಹಿಪರೆ ಜಗಕಾಶ್ಚರ್ಯ ಚರಿತ್ರೆಯುಂಟೆ ಪುರಂದರವಿಠಲ ಶರಣರ ಶರಣ ನಿನಗೆ ನಮೋ ನಮೋ ॥ ೧ ॥

**ಮಟ್ಟತಾಳ** ॥ ಜ್ಞಾನ ಭಕುತಿ ಇಲ್ಲದಾ ಹೀನನಾದಾ ಕಾರಣ । ನಾನು ನನ್ನದೆಂಬೊ ಹರಿ ಮಮ ............................... ಇದೇನಮಾಡು ಬೆನ್ನ ಬಿಡದಿದ್ದು ನೀನೆ ಸ್ವತಂತ್ರ ನಿನ್ನ ದಾಸಾ ನಾನೂ ದೀನ ಪುರಂದರವಿಠಲಾ ॥ ೨ ॥

**ಅಟತಾಳ** ॥ ..............................ನೆ ನಿನ್ನ ಬಂಟ ನಾದೆಲೊ ದೇವ । ನೀನೊಬ್ಬನೆ ಯೆನ್ನ ಸ್ವಾಮಿಯಾದೆಲೊ ದೇವಾ । ಯೇನಂದಾಡುವೆ ಅಳವಡುವೆ ............................... ನಿರಾಶೆಯೆಂಬೊ ಬಲುಹು ದೇವರದೇವ । ಯೇನಂದಾಡುವೆ ಅಳವಡುವೆ ಕಾಡುವೆ । ದೀನನಾಥಾ ನೀ ಕಾಪೆಯೆಂದು ............ ಮಾಣಿದಲವಾ ಪುರಂದರವಿಠಲ ಯೇನೆಂದಾಡುವೆ ॥ ೩ ॥

**ಝಂಪೆತಾಳ** ॥ ಬಿಲ್ಲ ಮುರಿದು ದನುಜರ ಹೊಯ್ಯೊ ಕೃಷ್ಣ । ಮಲ್ಲ ಬಂದ ............... ಮಧುರೆಗೈದು । ಹುಲ್ಲು ಮಲ್ಲರ ಮುರಿಯೊ ಕಂಸನ ಕೊಲ್ಲೊ ಕೃಷ್ಣ । ಪುರಂದರವಿಠಲ .........ಕಾಣೊ ಕೃಷ್ಣ ॥ ೪ ॥

**ಏಕತಾಳ** ॥ ಗಜವಂ ಶೀಳಿ ರಜಕನ ಮಡುಹಿ ಮಾವನ । ಮ ............ ಕುಬುಜೆ ತಂದ ದಿವ್ಯ ಗಂಧವ ಪೂಸಿದೆ ಮಾವನ ಮಡಿಯುಟ್ಟೆ ಧಾಮ ಸುಧಾಮರ ಪೂಗಳ ಮುಡಿದೆ ಮಾವನ ............ ಪುರಂದರವಿಠಲ ಬಲ್ಲಿದ ಕಾರಣ ॥ ೫ ॥

*ಹಳೆ ಪುಸ್ತಕ ಪತ್ರ ಹರದದೆ.

ಜತೆ ॥ ಜ್ಞಾನ ಭಕುತಿ ಮುಕುತಿ ವಿರಕುತಿ ದಿನದಿನ............
ಪುರಂದರವಿಠಲ ॥ ೬ ॥ ಶ್ರೀಃ ॥

## ೧೦. ಉಡುಪಿ ಕೃಷ್ಣ ಸುಳಾದಿ.

ಧ್ರುವತಾಳ ॥ ಅಂಗುಷ್ಠ ಮಾತುರವೆಂಬೊ ಮೂರುತಿಯು ಪರೀಕ್ಷಿಸಿ ಕಂಡು ಕಣ್ದೆರಿಸಿಕೊಂಬಾ ........................ ಮೂರುತಿಯು ಬಿಂಬಾಮೂರುತಿಯು ಜೀವದಕರ ಮೂರುತಿಯು । ಅಣುರೇಣುವೆಂಬ ಚಿನುಮಯ..................... ಮುನಿಗಳ ಹೃದಯದೊಳು ಮಿನುಗುವ ಮೂರುತಿಯು । ಆತುಮ ಮೂರುತಿ ಅಂತರಾತುಮ ಮೂರುತಿ......... ಬೊಮ್ಮ ಮೂರುತಿಯು ತಾನೆಲ್ಲಿಂದೆಲ್ಲಿ ಬಂದುದೊ । ಅಮರರಾ ಹರಣ ತಾನೆಲ್ಲಿಂದೆಲ್ಲಿ ನಿಂದುದೊ...... ಯೆಮಗೆ ಪ್ರಸನ್ನವಾದ ಈ ಉಡುಪಿನಕೃಷ್ಣ ಮೂರುತಿ ಪುರಂದರವಿಠಲನೊಲವೆಂತುಟೊ ॥ ೧ ॥

ಮಟ್ಟಿತಾಳ ॥ ಮಂದಾರ........ಲ್ಲಿಗೆ ಮುರೂಬಿ ದಿವ್ಯಾಂಬರವ ಸುಟ್ಟ ಗೋಪಿ ಗೋ । ವಿಂದನಾಡುವ ನಾಟ್ಯಂಗಳಾ ಪ್ರ । ಬಂಧ ಗೀತಂಗಳ ಪಾಡುತ ಚಂದದಂದದಿಂದ ಗೋಪಿಯರು ನೊಸರ ಮಂಥವಿ ಕಡವುತ । ನಂದದಿಯಶ್ರಮೇಯ ನಿಗಮಗೋಚರನೆಂದು । ನಂದವ್ರಜವೆತ್ತ ಈ ಉಡುಪಿಯ ಕೃಷ್ಣನ ಮಹಿಮೆಯೆತ್ತ । ವೃಂದಾರಕವಂದಿತ ಪುರಂದರ ವಿಠಲನೆಂದು ॥ ೨ ॥

ರೂಪಕತಾಳ ॥ ಪೊಂಬಟ್ಟೆ ಪಾಲುನೊಸರಲ್ಲಿ ತೋದಿದೆ । ಕಂಬು ಕಂಧರ ಕೆನೆಬೆಣ್ಣೆಯನೊರಸಿದೆ । ಅಂಬುಜನಾಭ ನೀನೆಲ್ಲೆಲ್ಲಿ ತುಡುಕಿಂದೆ । ಯೆಂಬೊ ಗೋಪಿಗೆ ಕೃಷ್ಣನಂಜುತಿಪ್ಪದ ಕಂಡೆ । ಅಂಬುಜಭವ ಪಿತ ಈ ಉಡುಪಿಯ ಕೃಷ್ಣ । ತಾಂ ಬಾಲಕನೆ ಪುರಂದರವಿಠಲರೇಯ ॥ ೩ ॥

ಅಟತಾಳ ॥ ದೇವ ತರುವ ನೇಮಿ ದೇವ ಕೊಳಲನೂದಿ । ದೇವ ಸ್ತ್ರೀಯರನುಟ್ಟ ದೇವಾಂಗದುಗುಳಲೂ । ಆವಾ ಸುಸ್ವರನೋ ಅವಾ

ಮೋಹನವೋ । ಆವಾ ಮೂರ್ಛನೆಯೊ ಆವಾ ಸೂನಾಡಿಯೋ । ದೇವ ಶ್ರೀಪುರಂದರವಿಠಲನಂಘ್ರಿಗಳಾಣೆ ಈ ಉಡುಪಿನ ಕೃಷ್ಣನಾದಿ ಮೂರುತಿ ತಪ್ಪಾ ॥ ೪ ॥

**ಏಕತಾಳ** ॥ ಒಂದು ಕೈಯಲಿ ಕಡಗೋಲು ಮ । ತ್ತೊಂದು ಕೈಯಲಿ ಕಡವ ನೇಣು । ನಿಂದು ತಾಯ ಮೊಗವಂ ನೋಡಿ । ನಂದನಕಂದ ನಲಿದಾಡುತ ದಿಂದಿಂದಿಂ । ದಿಂದಿಕಿ ಮುದ್ದು ಪುರಂದರವಿಠಲಾ ಉಡುಪಿನ ಕೃಷ್ಣ ॥ ೫ ॥

**ಜತೆ** ॥ ಉಡುಪಿನ ಕೃಷ್ಣ ಪುರಂದರವಿಠಲ । ಬಿಡೆನು ಬಿಡೆನು ನಿನ್ನ ಚರಣಕಮಲವಾ ॥ ೬ ॥ ತ್ರೀಃ ॥

## ೧೧. ಸುಳಾದಿ.

**ಧ್ರುವತಾಳ** ॥ ಒಡೆಯ ಹಾವಿಗೆ ಮೆಟ್ಟಿ ಹಾವಿಗೆಯುವ ನಾನು । ಒಡೆಯ ಮೆಲ್ಲಡಿಯಿಡಲು ಕಟ್ಟಿಗೆಯುವ ನಾನು ॥ ಕಡೆಯ ತಾಂಬೂಲವ ನುಗುಳುವ ವೇಳ್ಯಗಳಲ್ಲಿ । ಕಾಳಾಂಚಿಯುವ ನಾನು ॥ ಒಡೆಯನೊಡ್ಡೋಲಗದಲಿ ಚಿತ್ತೈಸಿರೆ । ಛತ್ರಚಾಮರ ಕನ್ನಡಿ ಪಿಡಿವವ ನಾನೊಡೆಯಗೆ । ಒಡೆಯ ಪುರಂದರವಿಠಲರೇಯನ। ಉಗುರು ಬಿದ್ದಲ್ಲಿ ಯೆನ್ನ ಶಿರವ ಕೊಡುವೆ ನಾನೊಡೆಯಗೆ ॥ ೧ ॥

**ಮಟ್ಟೆತಾಳ** ॥ ಹರಿಯನೋಲೈಸುವೆಂಬಣ್ಣಗಳಿರ ಕೇಳಿರೊ । ಶರಧಿಯಃ ಕಟ್ಟೆಟ್ಟು ಕುಲಂಕೆಯ ಮುಟ್ಟಿ । ಕುರಾವಣಾದಿಗಳ ಕೂಡೆ ಇರಿದಾಡುತಿರಬೇಕು । ಪುರಂದರವಿಠಲನೋಲಗದೊಳಗ ಘನಾ ॥ ೨ ॥

**ಅಟ್ಟತಾಳ** ॥ ಚಂದ್ರಮ ನೀನಿನ್ನು ನಿಂದಿರೆ ತೆರವಿಲ್ಲ । ಸೂರಿಯ ಗೈಯಿನ್ನು ತಿರುಗದಲೆ ಹೊತ್ತು । ಇಂದ್ರಾದಿಗಳಿಗೆಲ್ಲ ಹರಿಹರಿ । ನಿಂದು ತಕ್ಕೆಯನು ತುರಿಸೆ ಹೊತ್ತಿಲ್ಲ । ಬೊಮ್ಮಾದಿಗಳಿಗೂ ಒನ್ಮ್ಯಯು ತೆರಪಿಲ್ಲ । ಈ

ದೇವರೆಲ್ಲರೊಳೊಬ್ಬನೆ । ಮೆಟ್ಟಿ ಆಡುವ ನಮ್ಮ ಪುರಂದರವಿಠಲ । ಕಟ್ಟಾಳು ಕಾಣಿರೊ ॥ ೩ ॥

**ಏಕತಾಳ** ॥ ಶ್ರೀಕೃಷ್ಣರಾಯನರಮನೆಯ ಗಾಯಕರಾವು ದಿಟ್ಟರಾವು ವಿದ್ಯಾವಂತರಾವು । ಸೂತ್ರಮಾಗಧ ಬಂದಿಗಳಾವು । ಭಟ್ಟರಾವು ಪುರಂದರವಿಠಲನ ಸೇವಕರಾವು ॥ ೪ ॥

**ಆದಿತಾಳ** ॥ ಧರೆಯಂಜುತಲಿದೆ ಗಿರಿಗಳಂಜುತಲಿವೆ । ಮರಬಳ್ಳಿಗಳಂಜಿ ಫಲವನೀವುತಲಿವೆ ॥ ಸರಿತು ಸಮುದ್ರಗಳಂಜಿ ಬೆಚ್ಚುತಲಿವೆ । ಪುರಂದರವಿಠಲ ನೀನೆಂಥ ಅರಸೂ ॥ ೫ ॥

**ಜತೆ** ॥ ನಾ ಘನ ನೀ ಘನ ತಾ ಘನ ಯೆನಬೇಡಾ । ಪುರಂದರವಿಠಲನೊಬ್ಬನೆ ಘನ ॥ ೬ ॥ ಶ್ರೀಃ ॥

## ೧೨. ಸುಳಾದಿ.

**ಧ್ರುವತಾಳ** ॥ ಅಕಿಂಚನಗನರ್ಘ್ಯವಾದಂತೆ ಅರತಗಾರತವಾದಂತೆ । ಅಂಧಕಂಗೆ ಅಕ್ಷಿಯಾದಂತೆ। ಅರವಿಂದಗಾದಿತ್ಯವಾದಂತೆ । ಅಳಿಗೆ ಅಮರಾಂಘ್ರಿಪವಾದಂತೆ । ಅಪುಣ್ಯಕ್ಕೆ ಅಮೃತವಾದಂತೆ । ಅಯ್ಯಾ ಅಕಿಂಚನಗೆ ಅಪಾರ ಸಂಸಾರ ಭಯ ಭೇದ । ಅನೇಕ ಅಧಿಪತಿಯಾದಾ ಪುರಂದರವಿಠಲರೇಯಾ । ಯೆನಗೆ ನಿನ್ನ ಸಿರಿನಾಮ ದೊರಕಿತು ದೇವಾ ॥ ೧ ॥

**ಮಟ್ಟತಾಳ** ॥ ಅಖಿಳಾಂಕಚರಿತ ನಮೊ । ಸಕಲಸ್ವರೂಪ ನಮೊ ನಮೊ । ಭಕುತವತ್ಸಲ ನಮೊ ನಮೊ । ಬಕವಿದಾರಣ ನಮೊ ನಮೊ । ಅಕುತೋಭಯ ನಮೊ ನಮೊ । ರುಕುಮಿಣಿಪತಿ ಪುರಂದರವಿಠಲ ನಮೊ ನಮೋ ॥ ೨ ॥

**ಏಕತಾಳ** ॥ ಹೃದಯಕಮಲದಲ್ಲಿ ನಾ ನಿನ್ನ ಪಾದ । ಪದುಮವ ನೆನವಂತೆ ಮಾಡು । ಯದುರಾಜಾಧಿರಾಜ ಸುದರುಶನಧರಾ । ಇದನೆ ಕೃಪೆಮಾಡೆನಗೆ। ಮದನಪಿತಾ ಪುರಂದರವಿಠಲರೇಯ ॥ ೩ ॥

ಆದಿತಾಳ ॥ ಮನೆಯಾಶೆ ಮನ್ನಣೆ ಕೆಡಿಸುತಲಿದೆ । ಯೆನ್ನ ಮನ ಮನೆವಾರ್ತೆಯಾಶೆ ಮಹಾ ಬಾಧಿಸುತಿದೆ । ಧನದಾಶೆ ದೈನ್ಯಬಡಿಸುತಿದೆ । ವನಿತೆಯರಾಶೆನ್ನ ಒಡಲ ಸುಡುತಿದೆ । ಇನಿತಾಶೆಯ ಬಿಡಿಸು ಬುದ್ಧಿಯಲಿ ನಿನ್ನ ನೆನವಂತೆ ಮಾಡೆನಗೆ ಪುರಂದರವಿಠಲ ॥ ೪ ॥

ಅಟತಾಳ ॥ ಮರೆಹೊಕ್ಕವರ ಕಾವಾ ಮಾರಾಂತಕಗಿರಿವಾ । ದೇವ ನಿನಗಲ್ಲದುಂಟೆ ಸಚರಾಚರದೊಳು । ನಿನಗಲ್ಲದುಂಟೆ ನಾ ನಿನ್ನ ಮರೆಹೊಕ್ಕೆನಯ್ಯ । ನೀ ಯೆನ್ನ ಕಾದುಕೊ ಪುರಂದರವಿಠಲಾ ॥ ೫ ॥

ಜತೆ ॥ ನಿತ್ಯಾನಿತ್ಯ ಸುವಸ್ತುಗಳೊಳಗೆ । ನಿತ್ಯಸುನಿತ್ಯ ಪುರಂದರ ವಿಠಲಾ ॥ ೬ ॥ ಶ್ರೀಃ ॥

## ೧೩. ಸುಳಾದಿ.

ಧ್ರುವತಾಳ ॥ ಕ್ಷೀರಸಾಗರದಲ್ಲಿ ಹಾವಿನ ಹಾಸಿಗೆ ಓಜೆಯೊಳೊರಗಿಪ್ಪ ಎನ್ನೊಡೆಯ । ಹಾರಾ ಮುಕುಟ ಕುಂಡಲ ಪೀತಾಂಬರ । ಧಾರಿಯಾಗಿರುತಿಪ್ಪ ಯೆನ್ನೊಡೆಯಾ । ನಾರದ ಗರುಡ ಗಂಧರ್ವರ ಗಾನದಿ । ಓರಂತೆ ಸುಖಿಸುವ ಯೆನ್ನೊಡೆಯಾ । ಮಾರ ಚಾಮರಗಳ ಡಾಳಿಸುತ್ತಿರಲು । ಮಾರುತಿ ಕಂಬಿವಿಡಿದು ನಿಲಲೂ । ನೀರಜಾಲಯೆ ತಾನಡಿಗಳ ಪೊತ್ತಲು ಉ । ದಾರ ದೇವರದೇವನೊಲುಮೆಯಿಂದಾ । ಕಾರುಣ್ಯಸುಧೆಯನು ಸುರಿವ ಭಕ್ತರ ಮೇಲೆ । ಭೂರಮಣನೆ ಪುರಂದರವಿಠಲರೇಯಾ ॥ ೧ ॥

ಮಟ್ಟೆತಾಳ ॥ ಇಂದ್ರನೀಲಾಚಲದಲ್ಲಿ ಇಂದ್ರಚಾಪವು ಮೂಡಿದಂತೆ । ಕುಂದಕುಸುಮನಂಗದಲ್ಲಿ ಸರೋಜ ಚಂದ್ರಕಾಂತಿಗಳ ಶಯ್ಯೆ ತುಲಸಿಮಾಲೆಗಳ ಶಯ್ಯೆ । ಮುಂದಗಮನ ಗರುವರೇಯ ಉ । ಪೇಂದ್ರ ಪುರಂದರವಿಠಲ ॥ ೨ ॥

ತ್ರಿಪುಟತಾಳ ॥ ನೀಲಮೇಘಶ್ಯಾಮಳನೇ । ಬಾಲಭಾಸ್ಕರವರ್ಣಕುಡು । ಪಾಲಯ ಕೋಟಿಪ್ರಕಾಶನೆ ದೇವಾ । ಕೇಳಿಬಲ್ಲೆ ದೇವಾ ಕೇಳಿಬಲ್ಲೆ । ಅನೇಕವರ್ಣದಿಂದೋಲಗಿಪ್ಪಿ ಪುರಂದರವಿಠಲ ದೇವಾ ॥ ೩ ॥

**ಅಟತಾಳ** ॥ ನಿಚ್ಚಮಂಗಳನಿಧಿ ನೀನೆಂದು । ಸಚ್ಚಿದಾನಂದ ಸ್ವರೂಪ ನೀನೆಂದು । ಅಚ್ಯುತಾನಂತ ಗೋವಿಂದ ನೀನೆಂದು । ಮೆಚ್ಚಿದೆ ನಾ ನಿನ್ನ ಚರಣವ ಇಂದು । ಸಕಲಲೋಕಕಧಿದೈವ ನೀನೆಂದು । ರುಕುಮಿಣಿಪತಿ ಪುರಂದರವಿಠಲ ಯೆಂದು ॥ ೪ ॥

**ರೂಪಕತಾಳ** ॥ ಲೋಕದ ಮಾನವರೆಲ್ಲ ನಿರಾಕಾರವೆಂದೆನಲು ನಮ । ಗೇಕೋ ವಾದಾ ಬರಿದೆ ಕಾಕರಕಣನೊಳಗೆ। ಸಾಕಾರವನರಿಯದ ಮೂಢಾಕಾರರ ಕೂಡೆ ನಮಗೇಕೋ ವಾದಾ । ನಮಗಿದೇಕೋ ವಾದಾ । ಶ್ರೀ ವಿಷ್ಣುವೆಂಬ ಪುರಂದರವಿಠಲ ನೀನಿರಲು ॥ ೫ ॥

**ಆದಿತಾಳ** ॥ ಎನಗೊಬ್ಬ ವೊಡೆಯ ದೊರಕಿದ ದೊರಕಿದ । ಸುನಾಯಕದೇವ ಕಟ್ಟಲೆ ಕಂದಾಯವೀವಾ । ಬೇಡಿದ ಉಚಿತವ ನಾಮಗಳೀವಾ । ತುಷ್ಟಿನಷ್ಟಗಳಿಲ್ಲ ವಳಚಡಿತಗಳಿಲ್ಲ । ಎನ್ನ ಮನಬಂದಂತೆ ಓಲೈಸುವೆ ನಾನು । ಯೆನ್ನ ಮನಬಂದಾಗ ಓಲೈಸಿಕೊಂಬ । ಕೇಡಿಲ್ಲದೊಡೆಯ ಪುರಂದರವಿಠಲ ॥ ೬ ॥

**ಏಕತಾಳ** ॥ ದೇವ ದೇವಕಿನಂದನ ದೇವೋತ್ತುಮ ಗೋವಿಂದ । ಗೋವರ್ಧನಗಿರಿಧರ ಧರಣಿಧರ ದೇವಾ । ಜೀವ ಜಿಂಬ ಪುರಂದರ ವೋವಿ ನಿನ್ನಯ್ಯ ದೇವಾ ॥ ೭ ॥

**ಜತೆ** ॥ ಮನವಚನಕಾಯಕದಿಂದ ನಿನ್ನನೆ ನೋಡಿ । ಅನುದಿನ ನೆನವೆ ನಾ ಪುರಂದರವಿಠಲ ॥ ೮ ॥ ಶ್ರೀಃ ॥

## ೧೪. ಪಾರಿಜಾತ ಸುಳಾದಿ.

**ಧ್ರುವತಾಳ** ॥ ಪೊಂಬಣ್ಣದ ಹಕ್ಕಿಯ ಮೇಲೊಬ್ಬ ನೀ । ಲಾಂಬುದಶ್ಯಾಮ ಕೋಮಲ ಕುಳ್ಳಿರ್ದು । ಪೊಂಬಟ್ಟೆಯನುಟ್ಟು ಸರ್ವಾಭರಣ ತೊಟ್ಟು । ಅಂಬುಜಮುಖಿಯ ತೊಡೆಯಮೇಲಿಟ್ಟು । ಕೆಂಬಣ್ಣದ ತರುವಿಡಿದು ಎವೆಯಿಕ್ಕದೆ । ಇಂಬಿಲ್ಲದೆ ಇಕ್ಕೆಲದಿ ಬಾಲೆ ಅಂಬರದಲಿ ನಮ್ಮುಕ್ಷ

ರಿಗೆಯ ಮುಂದೆ । ಸಂಭ್ರಮದಿ ಸುಳಿವವನಾರೆ ಯೆಲೆ ಮರುಳೆ । ಅವರು ಸೇವಕ ಸುರರು ಅದು ಸುರತರು ಅವಳೀಗಾ ಸತ್ಯಭಾಮೆ । ಗರುಡವಾಹನ ನಾಗಿ ತಮ್ಮರಮನೆಗಾಗಿ । ಸರಿವುತ್ತ ನಿನ್ನ ಸೋಲಿಸಿದವನೂ ॥ ಗರುವ ನಮ್ಮ ಗುರು ಪುರಂದರವಿಠಲ । ಸುರರ ಗೆಲಿದು ತರು ಅವಳಿಗಿತ್ತಾ ॥ ೧ ॥

**ಮಟ್ಟೆತಾಳ** ॥ ಸುರನಾಥನ ಸೋಲಿಸಿ ಅಗ್ನಿಯಮರರನಂಜಿಸಿ । ನಿರುತಿ ವರುಣನ ನಿರಾಯುಧನ ಮಾಡಿ । ಮರುತ ಕುಬೇರರ ದುಸು...... ಮಾಡಿ । ಗಿರೀಶನ ಗರುಡನ ಗರಿಯ ಘಾಳಿಯಲಿ ವಿಮುಖ ಮಾಡಿ ದಳದ ವಿಭಾಡ ಮಾಡಿ । ತರುಣಿಗೆ ಸುರತರುವ ತಂದಿತ್ತ ಗುರು ಪುರಂದರವಿಠಲ ಅರಿದಳ ವಿಭಾಡರಾಯ ॥ ೨ ॥

**ಅಟತಾಳ** ॥ ಹರಿಯ ರಾಣಿಗೆ ಪಾರಿಜಾತಕದ ಒಂ । ದರಳನೀಯದ ಕಾರಣ । ಸುರತರುವ ಹರಿ ಕಿತ್ತಿಸಿದ ಶಚಿ । ಗರಸಗಾದುದು ಪರಿಭವ ಅಸಮವೀರ । ಗುರು ಪುರಂದರವಿಠಲ ಶರಣರಿಗೆ ತಲೆವಾಗಿ ನಡೆಯಿರೊ ಹರಿಯಾ ॥ ೩ ॥

**ಏಕತಾಳ** ॥ ಅಸುರರ ಬೇರಿಗೆ ಬಿಸಿನೀರೆರವ । ಸುರರ ಶುಭಲತೆಗಳನು ಚಿಗಿರಿಸುವಾ । ಸುರರು ಕೊಬ್ಬಿದರವರುಕ್ಕ ತಗ್ಗಿಸುವ । ನರರ ಒಂದೆ ಪರಿಯಲಿ ನಡಿಸುವ । ಅಸಮವೀರ ಗುರು ಪುರಂದರವಿಠಲ । ಸಂತಸಯಿತ್ತು ಜಗಂಗಳ ಪೊರೆವಾ ॥ ೪ ॥

**ಆದಿತಾಳ** ॥ ಸಜ್ಜನದಿ ಸಾರೂಪ್ಯದಿರವ ನೋಡಿ ಸತ್ಕರ್ಮವ ಮಾಡಿಸಿ ಸುಖವೀವಾ । ಮೂರ್ಜಗದಿ ಸಾರೂಪ್ಯದಿರವ ನೋಡಿ । ದುಷ್ಕರ್ಮವ ಮಾಡಿಸಿ ದುಃಖವೀವಾ ॥ ಅಬ್ಜನಾಭಾ ಗುರು ಪುರಂದರವಿಠಲ ತನ್ನಂದವ ವಹಿಸಿ ಯಮುಂದ ಭೂಷಣ ॥ ೫ ॥

**ಜತೆ** ॥ ಎಲ್ಲಾ ದೇಶದೊಳೆಲ್ಲ ಕಾಲದೊ । ಳೆಲ್ಲರೊಡೆಯ ಗುರು ಪುರಂದರವಿಠಲ ॥ ೬ ॥ ಶ್ರೀಃ ॥



# ೧೫. ಹರಿಸರ್ವೋತ್ತಮ ಸುಳಾದಿ.

**ಧ್ರುವತಾಳ** ॥ ಶಿವನೆ ಶುಕಯೋಗಿ ಕಾಣಿರೊ ಆ । ಶಿವನೆ ದುರ್ವಾಸ ಕಾಣಿರೊ। ಶಿವನಶ್ವತ್ಥಾಮ ಕಾಣಿರೊ । ಶಿವಗೆ ಪತಿಯಿಲ್ಲೆಂಬರಾನೇನೆಂಬೆ । ಶಿವನಾದಿಯಲಿ ಬೊಮ್ಮನ ಸುತ । ಆ ಬೊಮ್ಮನಾದಿಯಲಿ ಅಚ್ಯುತನ ಸುತ । ಪುರಂದರವಿಠಲನೊಬ್ಬನೆ ಅಜಾತನಾಗಿಯು ಜಾತನೆಂತಿಪ್ಪ ॥ ೧ ॥

**ಮಟ್ಟತಾಳ** ॥ ಹರಿ ಶಂಕರರೊಳಗುತ್ತಮರಾರೆಂದು । ಪರೀಕ್ಷಿಸಬೇಕೆಂದಾದಿಯುಗದಲ್ಲಿ । ಸರಸಿಜಸಂಭವಾದಿ ಸುರಪತಿ ಸುರರು । ಶಾರ್ಙ್ಗಪಿನಾಕಗಳನ್ನೆತ್ತಿರಿ ಯೆನಲು । ಹರಿ ಶಾರ್ಙ್ಗವನೆತ್ತಿದನೇರಿಸಿದ । ಶಂಕರ ನಿಶ್ಚೇಷ್ಟಿತನಾಗಿದ್ದ ಕಾಣಿರೊ । ಹರಿಯಾಡಿಸಲಾಡುವರಜಭವಾದಿಗಳು । ಪುರಂದರವಿಠಲ ಸರ್ವೋತ್ತಮ ಕಾಣಿರೋ ॥ ೨ ॥

**ಅಟತಾಳ** ॥ ಬಾಣಾಸುರನ ಭಕುತಿಗೊಲಿದು ಬಂದು । ಅವನ ಬಾಗಿಲ ಕ್ಕಾಯ್ದುದಿಲ್ಲವೆ ಶಿವನೂ ॥ ಬಾಹುಸಹಸ್ರವಂ ಕಡಿವಾಗಲು । ಒಮ್ಮೆ ಬೇಕು ಬೇಡೆಂದೆನ್ನಬೇಡವೆ ಶಿವನೂ ॥ ಪುರಂದರವಿಠಲ ಪರದೈವವೆಂದು । ಕಂಡುಬಲ್ಲ ಕಾರಣ ಒಪ್ಪಿಸಿಕೊಟ್ಟ ಶಿವನೂ ॥ ೩ ॥

**ಏಕತಾಳ** ॥ ಜನಕನ ಮನೆಯಲ್ಲಿ ಮುರಿಸಿಕೊಂಡಾ ಬಿಲ್ಲು । ಶಿವನ ಬಿಲ್ಲೆಂದರಿಯಿರೊ । ಹರನ ಬಿಲ್ಲೆಂದರಿಯಿರೊ ಅದು ಸುರಾಸುರರ । ಭಂಗಬಡಿಸಿ ಬಿದ್ದ ಬಿಲ್ಲು ॥ ಪುರಂದರವಿಠಲ ಶ್ರೀರಾಮ ಮುರಿದ ಬಿಲ್ಲು । ಶಿವನ ಬಿಲ್ಲೆಂದರಿಯಿರೋ ॥ ೪ ॥

**ಆದಿತಾಳ** ॥ ವಿಷ್ಣುಸಹಸ್ರನಾಮಗಳ ಶಿವ ಜಪಿಸಿ ಉಪದೇಶಿಸಿದಾಗ ಗೌರಿಗೆ । ರಾಮನಾಮವ ಭಕ್ತಿಭರದಲಿ ರಾಮ ರಾಮೆಂದು ಜಪಿಸಿ । ಪುರಂದರವಿಠಲರೇಯನ ಅತ್ಯಧಿಕಪ್ರಿಯರು ಉಮೇಶರು ॥ ೫ ॥

**ಝಂಪೆತಾಳ** ॥ ರಾಮ ವಿಶ್ವರೂಪವ ಕಂಡು ಶಂಕರ । ರಾಮನೆ ಪರದೈವ ರಾಮನೆ ಪರದೈವನೆಂತೆಂದು । ನುತಿಸಿದ ಕಾರಣ ರಾಮಚಂದ್ರ ಪುರಂದರವಿಠಲ ॥ ೬ ॥

**ರೂಪಕತಾಳ** ॥ ಮಣಿಕರ್ಣಿಕೆ ತೀರದಲ್ಲಿ ಮುಮುಕ್ಷುಗಳಿಗೆ ಉಪದೇಶಿಸುವ । ತಾರಕ ಬ್ರೊಮ್ಮ ಬ್ರೊಮ್ಮನೆಂಬಸವು ರಾಮನಾಮ ಮಂತ್ರವಾ । ಕಾಶಿಯಲ್ಲಿ ವಿಶ್ವೇಶ್ವರ ರಾಮರಾಮ ಪರಿಯೆಂಬ ತಾರಕಬ್ರೊಮ್ಮ । ಶ್ರೀಪುರಂದರವಿಠಲರೇಯನ ಇದಿರೆತ್ತಿದ ಶಿವಾ ॥ ೭ ॥

**ಜತೆ** ॥ ಜಗಕೆ ಶ್ರೀಪುರಂದರವಿಠಲನೆ ಪರದೈವ । ಜಗಕೆ ಶ್ರೀಅಜಭವಾದಿಗಳೆ ಗುರುಗಳೂ ॥ ೮ ॥ ಶ್ರೀ ॥

## ೧೬. ನಾಮಸ್ಮರಣ ಸುಳಾದಿ.

**ಧ್ರುವತಾಳ** ॥ ಇದರಿಂದ ಬಿಟ್ಟೆನ್ನಿಲ್ಲೆಂಬ ಮಹಾ ಭಯ ಬರಲಿ । ಇದರಿಂದ ಬಿಟ್ಟೆನ್ನಿಲ್ಲೆಂಬ ಮಹಾ ಭೀತಿ ಬರಲಿ ಇದರಿಂದ ಬಿಟ್ಟೆನ್ನಿಲ್ಲೆಂಬ ಮಹಾ ಮಾರಿ ಬರಲಿ । ಅದಕೊಂದಿಷ್ಟು ಕೊಂದವ ಕೊಂದ ಯೆಣಿಸಬೇಡಿ ಕಾಣಿರೋ । ಪುರಂದರವಿಠಲನೊಬ್ಬನೆ ಹಿಂದೆ ಹಾಯಿಸಿಕೊಂಬನಲ್ಲದೆ ॥ ೧ ॥

**ಮಟ್ಟೆತಾಳ** ॥ ಅಪಾಯ ಕೋಟಿಕೋಟಿಗಳಿಗೆ । ಉಪಾಯ ಒಂದೆ ಹರಿದಾಸರು ತೋರಿದ ಉಪಾಯ ಒಂದೆ । ಪುರಂದರವಿಠಲ ಯೆಂದು ಕೂಗಿಟ್ಟು ಕರವುದೆ ಉಪಾಯ ॥ ೨ ॥

**ಅಟೆತಾಳ** ॥ ಅಜಮಿಳನ ಯಮದೂತರೆಳೆವಾಗ । ಆಗಳಲ್ಲಿಗೆ ಬಂದರಚ್ಯುತನಾಳ್ಗಳು । ನಾರಗಾ ಎಂದು ನಾಲಿಗೆ ಸೋಂಕವಾ ಮುನ್ನಾ । ಯಮದಂಡವ ಖಂಡಿಸಿ ತುಂಡಿಸಿದರು । ಪುರಂದರವಿಠಲಾ ಯೆಂದು ನವಿಸುವ ಮುನ್ನಾ ॥ ೩ ॥

**ಝುಂಪೆತಾಳ** ॥ ಹಾ ಕೃಷ್ಣ ದ್ವಾರಕಾವಾಸಿ ಯೆಂಬುದ ಕೇಳಿ । ಶ್ರೀಪತಿ ಅಭಿಮಾನವ ಕಾಯನೆ ದ್ರೌಪದಿ । ಆ ಆ ಆ ದ್ರೌಪದಿ ಅಕ್ಷಯ ವಸ್ತ್ರವನಿತ್ತಾ । ಎನಗಾಪತ್ತಿಗಹ ನಂಟ ಪುರಂದರವಿಠಲ ॥ ೪ ॥

**ಏಕತಾಳ** ॥ ಹರಿ ಹರಿ ಹರಿ ನರಹರಿ ಯೆಂದು ಕೂಗಿಟ್ಟು ಕರೆವುದೆ ತಡಾ । ಕರದಲ್ಲಿಗೆ ಬಾಹ ಸುರನರ ಉರಗಲೋಕದೊಳಿದ್ದರೆಯು । ಪುರಂದರವಿಠಲ ಯೆಂದು ಕೂಗಿಟ್ಟು ಕರೆವುದೆ ತಡ ॥ ೫ ॥

ಜತೆ ॥ ತನ್ನ ಡಿಂಗರಿಗರ ತಾನೆತ್ತಿಕೊಂಬ । ಸನ್ನುತ ಸನ್ನುತ ಪುರಂದರವಿಠಲ ನಿನ್ನ ಪಾದವೆ ಗತಿ ॥ ೬ ॥ ಶ್ರೀ ॥

## ೧೭. ತ್ರಿಮೂರ್ತಿ ಸುಳಾದಿ.

ಧ್ರುವತಾಳ ॥ ತ್ರಿಶೂಲ ಡಮರುಗ ಭಸಿತ ರುದ್ರಾಕ್ಷಿಯ । ಪಶು ವಾಹನನಾದ ಒಂದು ಮೂರುತಿ । ನೊಸಲಲಿ ಶಿರಿನಾಮ ಶಂಖ ಚಕ್ರ ಗದೆ ಪದ್ಮ । ಬಿಸಜನೇತ್ರನೆ ಆದ ಒಂದು ಮೂರುತಿ । ಕುಶಲದ ಜಪಮಣಿಮಾಲೆಯ ಚತುರ್ಮುಖ । ವಸುಧೆಯ ಸೃಜಿಸುವದೊಂದು ಮೂರುತಿ ॥ ಎಸವದ ಭೇದವನಂತೆ ಕೋಟಿ ಭೇದಿಸಲು ಸಂ । ತೋಷದಿಂದ ನೋಡುತಿಪ್ಪದೊಂದು ಮೂರುತಿ । ಸನುಮೋಹನವೆ ಯೇಕಮೇವಾದ್ವಿತೀಯ ಯೇಕೋ । ನಿರ್ಮಲವಾಗಿಹದೊಂದು ಮೂರುತಿ । ಸುಮ್ಮನಾದರು ಒಮ್ಮೆ ಸುಳಿವಾ ತೋರುವಾ ತೋರುವಾ ಪರ । ಬೊಮ್ಮನೊಳಗಾಡುತಿಹ ಪ್ಪೊಂದು ಮೂರುತಿ । ನಮ್ಮ ದೇವಾ ನಿಮ್ಮ ದೇವಾ ತಮ್ಮ ದೇವಾನೆಂಬ । ಹಮ್ಮಿನಿಂದ ನೋಡುತಿಹ ಒಂದು ಮೂರುತಿ ॥ ಅಮ್ಮನೊಮ್ಮೆ ನಾ ಕರದ್ದಿಡಿವೆನೆಂದರೆ । ಪುರಂದರವಿಠಲನೆ ಒಂದು ಮೂರುತಿ ॥ ೧ ॥

ಮಟ್ಟೆತಾಳ ॥ ಸತ್ವರಜತಮಕೆ ಸಕಲ ಮೂರುತಿ । ಭೃತ್ಯ ರಂಗ ಸಂಗರದಲಿ ನಲಿವಾ ಮೂರುತಿ । ವಸ್ತುವಿನ್ನಾದರದರಾಜ ಚೆನ್ನಮೂ । ರುತಿ ಪುರಂದರಾವಿಠಲನೆ ಚೆನ್ನಮೂರುತಿ ॥ ೨ ॥

ರೂಪಕತಾಳ ॥ ಸಾಸಿರ ನಾಮಕೆ ಸಾಸಿರ ಮೂರುತಿ । ವಾಸುಕಿ ಶಯನನಾದಾ ಅನಂತ ಮೂರುತಿ । ಶಾಶ್ವತ ನೆನವರ ಸಲಹುವ ಮೂರುತಿ । ಸಾಸಿರದಳದೊಳೊಪ್ಪುವ ಮೂರುತಿ । ಯಶೋದೆಮೊಲೆಯನುಂಬ ಪುರಂದರವಿಠಲನೆ ಕರುಣದ ಮೂರುತಿ ॥ ೩ ॥

ಝಂಪೆತಾಳ ॥ ಅನಂತ ಮಕುಟ ಅನಂತ ಶಿರಸಾ । ಅನಂತ ಕಂಧರಾ ಅನಂತ ಚಕ್ಷು । ಅನಂತ ಕರ್ಣ ಅನಂತ ನಾಸಿಕಾ । ಅನಂತ

ಜಿಹ್ವೆ ಅನಂತ ಕಂಠ । ಅನಂತ ಬಾಹು ಅನಂತ ಅಂಗುಲಿಯು । ಅನಂತ ಶ್ರೀಮುದ್ರೆ ಅನಂತ ಶ್ರೀಗಂಧಾ । ಅನಂತ ಶ್ರೀತುಲಸಿ ಅನಂತ ವೈಜಯಂತಿ ವನಮಾಲೆ । ಇಂತೊಪ್ಪುವ ಅನಂತ ವಕ್ಷ ಅನಂತ ಕುಕ್ಷಿ । ಅನಂತ ನಾಭಿ ಅನಂತ ಕಟಿಯು । ಅನಂತ ಜಾನು ಅನಂತ ಜಂಘೆ । ಅನಂತ ಚರಣ ಅನಂತ ಪೆಂಡ್ಯವು । ಅನಂತ ಜಗಂಗಳ ಒಳಗೆ ಹೊರಗಿಪ್ಪ । ನಮ್ಮ ಪುರಂದರವಿಠಲನೊಬ್ಬನೆ ಅನಂತಾನಂತ ॥ ೪ ॥

**ತ್ರಿಪುಟತಾಳ** ॥ ಬ್ರಹ್ಮಗೆ ಶ್ರೀರಂಗ ಮೂರುತಿ । ರುದ್ರಗೆ ನರಸಿಂಹ ಮೂರುತಿ । ಇಂದ್ರಗೆ ಉಪೇಂದ್ರ ಮೂರುತಿ । ಚಂದ್ರಗೆ ದಧಿವಾಮನ ಮೂರುತಿ । ಸೂರ್ಯಗೆ ನಾರಾಯಣ ಮೂರುತಿ । ಅಗ್ನಿಗೆ ಪರಶುರಾಮ ಮೂರುತಿ । ಸಕಲ ಬ್ರಹ್ಮಾಂಡಕೋಟಿಗಳಿಗೆ ಕಾಲಪುರುಷ ಶ್ರೀವಿಷ್ಣು ಮೂರುತಿ । ಯೆನಗೆ ಮೂರುತಿ ಪರಿಪೂರ್ಣ ಬ್ರಹ್ಮ ಪುರಂದರವಿಠಲನೆ ಮೂರುತಿ ॥ ೫ ॥

**ಅಟತಾಳ** ॥ ಅಣುಮಹತ್ತಿಗೆ ಒರುವ ಮೂರುತಿ । ತೃಣಕಾಷ್ಠಂಗಳಲ್ಲಿ ಪರಿಪೂರ್ಣ ಮೂರುತಿ । ಗಣನೆಯಿಲ್ಲದ ಮೂರುತಿ ಗರುಡವಾಹನ ಮೂರುತಿ । ಸನಕಾದಿಗಳಲ್ಲಿ ಸಾನ್ನಿಧ್ಯ ಮೂರುತಿ । ಮನುಜೋತ್ತಮರಲ್ಲಿ ಮಿನುಗುವ ಮೂರುತಿ । ಎನಗೆ ಇದೇ ಪುರಂದರವಿಠಲನೆ ಮೂರುತಿ ॥ ೬ ॥

**ಏಕತಾಳ** ॥ ಏಕೊ ಏಕೋ ಮೂರುತಿ । ಲೋಕವೆಲ್ಲ ಈತನೆ ಮೂರುತಿ । ಕಾಲದೇಶಂಗಳಲ್ಲಿ ಅಪ್ರಮೇಯ ಮೂರುತಿ । ಲೋಕಲೋಕಂಗಳಿಗೆ ವ್ಯಾಪ್ತವಾದ ಮೂರುತಿ । ಏಕಮೇವಾ ಪುರಂದರವಿಠಲನೆ ಮೂರುತಿ ॥ ೭ ॥

**ಜತೆ** ॥ ಅನಂತ ಮೂರುತಿ ಅನಂತ ಕೀರುತಿ । ಅನಂತ ನಾಮಾ ಶ್ರೀಪುರಂದರವಿಠಲಾ ॥ ೮ ॥

## ೧೮. ನಿಂದಾಸ್ತುತಿ ಸುಳಾದಿ.

**ಧ್ರುವತಾಳ** ॥ ಗೋಪಿದೇವಿಯಂತೊರಳಲ್ಲಿ ಕಟ್ಟಿದೆ ಬಂದೆ ದಬುವಲೆ ಬಿಡುವೆ ನಾ । ಭೀಷ್ಮನಂತೆ ಹಣೆಲೊಡೆಯಾಲೆಸೆಯದೆ ಬಂದೆ ದಬು

ದಲಿ ಬಿಡುವೆ ನಾ । ಭೃಗುಋಷಿಯಂತೆದೆಲೊದೆಯಾದೆ ಬಂದೆ ದಬುದಲಿ ಬಿಡುವೆ ನಾ । ನಾ ನಿನ್ನ ಬಳಲಿಸಿ ಕಾಡುತಿರೆ ಬೋಡಿ ಯೆಮ್ಮೆಗೆ ಕೊಡಲಿ ಮದ್ದೆಂಬಂತೆ । ನಿನಗವರೆ ಮದ್ದು ಪುರಂದರವಿಠಲಾ ॥ ೧ ॥

**ಮಟ್ಟೆತಾಳ** ॥ ಕಾಳಿಯನಂತೆ ನಿನ್ನ ಕಟ್ಟೆ ಬಿಗಿಯಬೇಕು । ಬಲಿಯಂತೆ ಬಾಗಿಲು ಕಾಯಿಸಲು ಬೇಕು । ಕುಬುಜೆಯಂತೆ ನಿನ್ನ ರಟ್ಟೆಭೂತು ಮಾಡಿ । ಮುಂಜೆರಗನು ಪಿಡಿದು ಗುಂಜಿಹಾಸಲು ಬೇಕು । ಹುಟ್ಟಿದೂರಲಿ ತಿರಿದುಂಬಂತೆ ಮಾಡಬೇಕು । ಪುರಂದರವಿಠಲ ನಿನಗಂಜದಿರಬೇಕು ॥ ೨ ॥

**ಅಟತಾಳ** ॥ ಪಾಂಡುತನಯರಂತೆ ಕರಕರದು ನಿನ್ನ ಅಟ್ಟಿ । ಮಣಿಹ ಹರಿ ಮಣಿಹಕಿಕ್ಕಬೇಕು । ಅರ್ಜುನನಂತೆ ನಿನ್ನ ಭಂಡಿಯ ಬೋವನ ಮಾಡಿ । ಬಿಲ್ಲಂಬು ತಾ ಯೆಂಬ ಊಳಿಗಕಿಕ್ಕಬೇಕು । ಪುರಂದರವಿಠಲ ನಿನಗಂಜಿದೆ ನಾ ಅನುದಿನ । ಘನಪದನೆಳಲೊಳಿರಬೇಕು ॥ ೩ ॥

**ಏಕತಾಳ** ॥ ಬಲಿಯಂತೆ ಮಕುಟವಾ ಕಿತ್ತುಕೊಂಡೋಡಬೇಕು । ವಾಲಿಯಂತೆ ನಿನ್ನ ಲೆಕ್ಕಿಸದಿರಬೇಕು । ಸುಗ್ರೀವನಂತೆ ನಿನ್ನ ಮೂದಲಿಸಲು ಬೇಕು । ಪುರಂದರವಿಠಲ ನಿನಗಂಜದಿರಬೇಕು ॥ ೪ ॥

**ಆದಿತಾಳ** ॥ ಇಂದ್ರನಂತೆ ಮಳೆಗರೆದು ಗೋಕುಲದಲ್ಲಿ । ನಿಂದಿರಿಸಿ ಕೊಳ್ಳಬೇಕೇಳುದಿನ । ಗೋವರ್ಧನಗಿರಿಯನು ಹೊರಿಸಿ ನಿಲಿಸಬೇಕು । ಪುರಂದರವಿಠಲ ನಿನಗಂಜದಿರಬೇಕು ॥ ೫ ॥

**ಜತೆ** ॥ ಅಂಜುವರಿಗೆ ದೈವ ಬೊಮ್ಮರಕ್ಕಸನಂತೆ । ಅಂಜೆ ನಾ ನಿನಗಿನ್ನು ಪುರಂದರವಿಠಲ ॥ ೬ ॥ ಶ್ರೀಃ ॥



# ೧೯. ಜನ್ಮಸುಳಾದಿ.

**ಧ್ರುವತಾಳ** ॥ ಎಂಭತ್ತುನಾಲ್ಕುಲಕ್ಷ ಯೋನಿಮುಖಂಗಳಲ್ಲಿ ಪುಟ್ಟಿ ಪುಟ್ಟಿ । ಹೊಂದಿ ಹೊಂದಿ ಬಳಲಿದೆನಯ್ಯ ನಾನು । ಸುಕೃತ ದುಷ್ಕೃತ

ವೆಂಬೊ ಕರ್ಮಕೋಟಲೆಯಿಂದ । ತಾಪತ್ರಯದಿ ಬೆಂದು ಬಳಲಿದೆನಯ್ಯ ನಾನು । ಇಪ್ಪತ್ತೆಂಟುಕೋಟಿ ನಾಯಕ ನರಕಂಗಳಲಿ ಕಾಲನವರಿಗೆ ಸಿಕ್ಕಿ । ಕಡು ನೊಂದೆನಯ್ಯ ನಾನು । ಯೆಂದಿಗೆ ಮಾನುಷಜನ್ಮ ಪೊರಕೊಂಡೆಯ್ಯ ಹರಿಹರಿ । ಎಂದಿಗೆ ನಿನ್ನವರಂಘ್ರಿ ದೊರಕೊಂಡೆ । ಇನ್ನು ನಿನ್ನ ಬಿಟ್ಟು ಬಳಲಲಾರೆನಯ್ಯ ನಾನು ಮರೆಹೊಕ್ಕೆ ಪುರಂದರವಿಠಲರಾಯ ದಮ್ಮಯ್ಯ ॥ ೧ ॥

**ಮಟ್ಟೆತಾಳ** ॥ ಅನಂತಾನಂತ ದೇವರ್ಕ್ಕಿದರೆ ಅನಂತಾನಂತ ಕರ್ಮಗಳ್ಳಿದರೆ । ಅನಂತಾನಂತ ಪರಿಯಲಿ ಅವರಾಡಿಸಿ ಉಡಿಸಿ ನೋಡ ನೋಡಲಾಗದೆ । ಅನಂತಾನಂತ ಪರಿಯಲಿ ಎನ್ನೊಬ್ಬನ ಸಂಸಾರಿಯ ಮಾಡದಿದ್ದರೆ । ಕಡಮೆಯೆ ನಿನಗೆ ಪುರಂದರವಿಠಲ ಅನಂತಾನಂತಾ ॥ ೨ ॥

**ಅಟತಾಳ** ॥ ಸಂಸಾರಿಗೆ ಮನಸೋತು ಮೆಚ್ಚಿದ ಹೆಣ್ಣು । ಸಂಸಾರವನೆಂತು ಸಂತವಿಟ್ಟರಯ್ಯ । ಕಂಸಾರಿಗೆ ಮನಸೋತ ಮಾಧವಿಯರು । ಸಂಸಾರವನೆಂತು ಸಂತವಿಟ್ಟರಯ್ಯ । ಹಂಸಮೂರುತಿ ಪುರಂದರವಿಠಲನಕ್ಷಿ ಹಂಸಿ ಹತ್ತಿದ ಬಳಿಕನ್ಯವನರಿಯರೂ ॥ ೩ ॥

**ಝಂಪೆತಾಳ** ॥ ಹರಿಯ ಭಕುತಿ ನರಹರಿಯ ಭಕುತಿ । ಶಿರಿಹರಿಯ ಭಕುತಿಯೆಂಬ ಸುಧೆಯ ಸಾಗರವಿರೆ । ಅರಿವರೆ ವಿಷಯವೆಂಬರೆ । ಕೊಳಚೆಯ ನೀರಾ ಯೆಲೆ ಯೆಲೆ ಮನವೆ । ನಳಿನನಾಭನ ನೆನೆ ಯೆಲೆ ಯೆಲೆ ಮನವೆ । ಜಲರುಹಾಕ್ಷನ ನೆನೆ ಮರಳಿ ಮರಳಿ ಬಹ ಸಂಸಾರವ । ಗೆಲುವರೆ ಪುರಂದರವಿಠಲನ ಸ್ನೇಹ ಶಿಷ್ಯರ ನೆನೆ ॥ ೪ ॥

**ಏಕತಾಳ** ॥ ಸಾದೃಷ್ಟ ದೈವವೆಂಬ ಸಾಸಿರಮಂದಿದ್ದಲವಾದಿಗಳ ಕಾಲ್ಪಿಡಿದು ಬದುಕಿರಯ್ಯ । ವಿಠಲನೆಂಬಂತೆ ಕಾರಣ ಕಾಲ್ಪಿಡಿದು ಬದುಕಿರಯ್ಯ । ಸೃಷ್ಟಿಸ್ಥಿತಿಲಯಕೆ ಪುರಂದರವಿಠಲನೊಬ್ಬನೆ ಕರ್ತೃ ಕಾಣಿರೊ ॥ ೫ ॥

**ಜತೆ** ॥ ಅಹಂಕಾರ ಮಮಕಾರ ಮಮತೆ ಉಂಬಾ । ದಿಂದಿ ದಿಂದಿ ದಿಂದಿ ಪುರಂದರವಿಠಲ ॥ ೬ ॥ ಶ್ರೀಃ ॥

## ೨೦. ಸುಳಾದಿ.

ರಾಗ ನಾಟಿ.

**ಧ್ರುವತಾಳ** ॥ ವನಗಿರಿಯಿಂದ ತಿಮ್ಮರಾಯ ಬಂದ । ಸಿಂಹಗಿರಿಯಿಂದ ನರಸಿಂಹ ಬಂದ । ಹಸ್ತಿಗಿರಿಯಿಂದ ವರದರಾಜ ಬಂದ । ಕೇತು ಗಿರಿಯಿಂದ ನಾರಾಯಣ ಬಂದ । ಕಾವೇರಿಯಿಂದ ರಂಗನಾಥ ಬಂದ । ಪುರುಷೋತ್ತಮದಿಂದ ಜಗನ್ನಾಥ ಬಂದ । ಪಾಂಡುರಂಗದಿಂದಲೆನ್ನ ಮನ್ನಿಸಿ ಮನೆಗೆ । ಪುರಂದರವಿಠಲ ತಾನೆ ಬಂದ ॥ ೧ ॥

**ಮಟ್ಟೆತಾಳ** ॥ ಬದರಿಕಾಶ್ರಮದಿಂದ ಬಾದರಾಯಣ ಬಂದ । ಕಿಂಪುರುಷಖಂಡದಿಂದ ಹನುಮಂತನೊಡೆಯ ರಾಮರಾಯನೆ ಬಂದಾ ॥ ಅನಂತಶಯನದಿಂದ ಅನಂತಮೂರುತಿ ಬಂದ । ಕ್ಷೀರವಾರಿಧೀಶ ಪುರಂದರ ವಿಠಲ ॥ ೨ ॥

**ಅಟತಾಳ** ॥ ಶ್ರೀಮದನಂತಶಯನದಿಂದ ಶ್ರೀಮದಾಚಾರ್ಯರ । ಶ್ರೀಮುದ್ದು ಉಡುಪಿನ ಕೃಷ್ಣ ಬಂದ । ಶ್ರೀಮನೋಹರ ದ್ವಾರಾವತಿಯಲಿ । ಶ್ರೀಪುರಂದರವಿಠಲ ಬಂದ ॥ ೩ ॥

**ಆದಿತಾಳ** ॥ ಪ್ರಯಾಗ ಮಾಧವ ಕಾಶಿಯ ಆದಿಕೇಶವ ಕ್ಲೇಶ ನಾಶನ ಬಂದ ಗಯಾ ಗದಾಧರ ಬಂದ । ಆ ಆ ಆ ದಾಸರ ಮನೆಗೆ ಶ್ರೀ ಪುರಂದರವಿಠಲ ಬಂದ ॥ ೪ ॥

**ಏಕತಾಳ** ॥ ಅತಳ ವಿತಳದಿಂದ ಸುತಳ ಮಹಾತಳ ತಳಾತಳ ರಸಾತಳ ಪಾತಾಳದಿಂದ । ಭೂತಳದಿಂದ ನಭಸ್ಥಳದಿಂದ ಸುಜನ ಮಹಾ ಜನ ತಪ ಸತ್ಯಲೋಕದಿಂದ । ಪರಮಪದವಿಯಿಂದ ಪರಿಪೂರ್ಣ ಬೊಮ್ಮ ಪುರಂದರವಿಠಲನೆ ಬಂದ ॥ ೫ ॥

**ಜತೆ** ॥ ಅಂತಿಂತೆನ್ನದೆ ಎನ್ನಂತರಂಗದಿ । ಸಂತತ ನೆಲೆಯಾದ ಶ್ರೀ ಪುರಂದರವಿಠಲಾ ॥ ೬ ॥ ಶ್ರೀಃ ॥

## ೨೧. ಸುಳಾದಿ.

ರಾಗ ಭೂಪಾಳಿ.

**ಧ್ರುವತಾಳ** ॥ ಬೆಳಗಪ್ಪ ಜಾವದಲಿ ಕಳನಿದ್ರೆಗಂಗಳ । ಬೆಳಗ ನೋಡುತ ಗಹಘಮ್ಮೆನ್ನುತ । ಬೆಳಗಾ ನೋಡುತ ಹೊನ್ನ ಕಿರುಗೆಜ್ಜೆ ಕಡಗವು । ಘಲಘಲಕೆನೆ ತೊಟ್ಟಿಲನೊದವುತಾ । ಸುಳಿಗುರುಳರಳೆಲೆ ಕೊರಳ ಪದಕ ತಾಳಿ । ಬಳೆಯುಡಿದಾರ ಮುಂಗೈಯ ಮುರಾರಿ ಬೆ । ರಳ ಬಾಯೊಳು ಚಪ್ಪರಿವಂತೆ ವೈ । ಗಳ ಮುರಿಮುರಿವುತ್ತಾ ತುಂಬಿಗುರುಳ ಕೃಷ್ಣಯ್ಯ । ನಳನಳಿಸುವ ನಳಿತೋಳ್ಗಳಿಂದ । ಹಳಹಳಿಸುವ ವನಮಾಲೆಗಳಿಂದ । ಥಳಥಳಿಸುವ ಪೀತಾಂಬರಗಳಿಂದ । ಕಳಕಳಿಸಿ ನಗುವ ಗುರು ಪುರಂದರವಿಠಲ ॥ ೧ ॥

**ಮಟ್ಟೆತಾಳ** ॥ ಕಣ್ಣೆಘಚ್ಚಿದ ಮುದ್ದಿನ ಕಪ್ಪು ಕಲಸಿ ಮೊಗವವೆಲ್ಲ ತುಂಬಿತು । ಚಿಣ್ಣ ಕಣ್ಣಮುಚ್ಚಿ ತೊಟ್ಟಿಲೊಳಗಿರ ಕೈಯಮುಟ್ಟಿ ಕಾಡುವಾ । ಬಣ್ಣಿಸಿ ಉಣ್ಣಿಸಿ ಆಡಿದರೆ ಪಾಟಿಮಾಡದೇನ ಮಾಡುವೆ । ಚಿಣ್ಣ ಗುರು ಪುರಂದರವಿಠಲನ ಸೊಬಗ ನೋಡಿ ಮರದೆ ಮಾಟವಾ ॥ ೨ ॥

**ಅಟತಾಳ** ॥ ತಮ್ಮ ಮೊಲೆಯ ಬಿಡೊ ಬಲಿಭಂಜನನೆ । ತಮ್ಮ ಮೊಲೆಯ ಬಿಡೊ ಬಲರಾಮಯ್ಯ । ತಮ್ಮ ಮೊಲೆಯ ಬಿಡೊ ಇನ್ನಾದರೂ ಇಂಥಾ । ಅಮ್ಮಯ್ಯ ಅಸುವ ಹೀರಿ ಬಿರಸಿನುಂಬುವರುಂಟೇ । ಬೊಮ್ಮನ ತಂದೆ ಯೆಂಬೊ ಪೆಸರ ಕಳಾಪಿ ಇ । ನ್ನೊಮ್ಮೆ ನೀವೆ ಗುರು ಪುರಂದರ ವಿಠಲ ॥ ೩ ॥

**ಝಂಪೆತಾಳ** ॥ ತುಂಗಫಣಮಣಿಗಳ ಬೆಳಕಿನಲಿ ಭು । ಜಂಗ ಪತಿಯ ಮೇಲೊರಗಿಪ್ಪ । ರಂಗಯ್ಯ ಮುದ್ದು ಕೃಷ್ಣಯ್ಯಾ । ನಮ್ಮ ಚಿಣ್ಣಗೆ ನಿದ್ರೆಯ ತಾರಯ್ಯ । ಎಲೆ ರಂಗಯ್ಯ ಮುದ್ದು ಕೃಷ್ಣಯ್ಯ । ಕಂಗಳ ಮುಚ್ಚುತ್ತ ತೆರವುತಲಿಪ್ಪ ಶು । ಭಾಂಗ ನಮ್ಮ ಗುರು ಪುರಂದರವಿಠಲ ॥ ೪ ॥

**ಏಕತಾಳ** ॥ ದಿಶಿಜವೈರಿಯೆ ತ್ರುಪ್ಪಿ ದೀನನಾಥನೆ ತ್ರುಪ್ಪಿ । ತೆತ್ತಿಸ ಕೋಟಿ ದೇವರ ತೆತ್ತಿಗ ಹರಿಯೆ ತ್ರುಪ್ಪಿ । ತ್ರುತ್ರುಪ್ಪಿ ತ್ರುತ್ರುಪ್ಪಿ ಕೃಷ್ಣ ತ್ರುಪ್ಪಿ

ಜೋಜೋ ॥ ಆದಿಮೂಲನೆ ತ್ರುವ್ವಿ ಅತಿಮೋಹಸನೆ ತ್ರುವ್ವಿ । ಕರ್ತೃ ಗುರು ಪುರಂದರವಿಠಲರೇಯ ತ್ರುವ್ವಿ ॥ ೫ ॥

**ಜತೆ** ॥ ರಂಗ ಬಾ ಹೆಂಗಲಸನೆ ಮುದ್ದು ರಂಗಾ । ಗುರು ಪುರಂದರ ವಿಠಲಾ ರಂಗ ಬಾ ನ್ಮೊಂಗೊಳಲೂದುತ ॥ ೬ ॥ ತ್ರಿ೯ ॥

## ೨೨. ಸುಳಾದಿ.

ರಾಗ ನಾಟಿ.

**ಅಟ್ಟತಾಳ** ॥ ಹರಿ ನಡೆಯದಿರಲು ನಡೆಯದೆಲ್ಲ ಜಗ । ಹರಿ ನುಡಿಯದಿರಲು ನುಡಿಯದೆಲ್ಲ ಜಗ । ಹರಿ ನೋಡದಿರಲು ನೋಡದೆಲ್ಲ ಜಗ । ಹರಿ ಮಾಡದಿರಲು ಮಾಡದೆಲ್ಲ ಜಗ । ಹರಿ ಉಸುರಿಕ್ಕದಿರೆ ಉಸುರಿಕ್ಕದೀ ಜಗ । ಹರಿ ಯೆವೆಯಿಕ್ಕದಿರೆ ಯೆವೆಯಿಕ್ಕದೀಜಗ । ಹರಿ ಸರ್ವಪ್ರೇರಕ ಪುರಂದರವಿಠಲ । ಹರಿಯಾಡಿಸಿದಂತಾಡುತಿಪ್ಪುದು ಜಗ ॥ ೧ ॥

**ರೂಪಕತಾಳ** ॥ ಶ್ರೀವತ್ಸಲ ಶ್ರೀಧರಾ ಸುರಗಣಮುಕುಟಮಂಡಿತ ಚರಣಾರವಿಂದ । ಪುರುಷೋತ್ತಮ ವಾಮನ ವಾಸುದೇವ ನರಹರಿ ದೇವೋತ್ತಮ । ಗೋವರ್ಧನಧರ ದೇವಕೀನಂದನ ಶ್ರೀವಲ್ಲಭ ಭೂವಲ್ಲಭ । ಪರಮೇಶ್ವರ ಪರಂತಪ ಪುರಂದರವಿಠಲ ಪುಂಡಲೀಕವರದಾ ॥ ೨ ॥

**ಮಟ್ಟೆತಾಳ** ॥ ಮುನ್ನ ನೃಕಂಠೀರ ಕಂಚಿಕಾರನಾಗಿ । ನಂದಗೋಪ ನಂದನರು ಹಿಂದಣ ಕಾಲಾಳು । ಅಂಜದಿರೆಲೊ ಜೀವ ರಾಮಲಕ್ಷ್ಮಣ । ಧನುರ್ಧರರಾಗಿ ಯೆಡಬಲದಲ್ಲಿ । ತಂದೆತಾಯಿ ಶಿಶುವ ಕಾಯುವಂದದಲಿ ಇದ್ದರು । ಅನಿಮಿತ್ತ ಬಂಧು ಕಾಣೋ । ತನುಸಂಬಂಧ ಯಂತಲ್ಲಾ । ಅನವರತ ಪುರಂದರವಿಠಲನ ಕಾವು ಘನವು ॥ ೩ ॥

**ಝಂಪೆತಾಳ** ॥ ನೀನು ಮಹಾಮಹಿಮನೆಂದು ಅರಿತರಿತು । ಮತ್ತೀನು ಶಂಕೆ । ಅತಂಕವಿಲ್ಲದೆ ನಡೆಗೊಮ್ಮೆ ಕರವೆ । ಅಡಿಗಡಿಗೆ ಕರವೆ ನಿನ್ನ

ನಯನುಡಿಗೊಮ್ಮೆ ಕರವೆ ನಾನಯ್ಯ । ಅಡಿಗೊಮ್ಮೆ ಕರವೆ ॥ ಈಯಪರಾಧಕ್ಕೆ ನಿನ್ನ ತೊತ್ತು ತೊಂಡನಾಗಿಹೆ ಪುರಂದರವಿಠಲ ನಿನ್ನ ನಾನಯ್ಯ । ೪ ॥

**ಏಕತಾಳ** ॥ ನರಹರಿ ಅಂದು ಇಂದು ಎಂದೆಂದಿಗು । ನೀನೆ ಗತಿ ಇಂದಿರೆಯರಸಾ । ಇಂದೊಂದೆ ಮಾತು ಪುರಂದರವಿಠಲ ತಪ್ಪಾ ॥ ೫ ॥

**ತ್ರಿಪುಟತಾಳ** ॥ ನಿನ್ನಂಥ ಮಗನಾಗಬೇಕೆಂದೆಂದು ಕಾಮಿಸೆ । ನಿನ್ನಂಥವರಿಲ್ಲವಾಗಿ ನೀನೆ ಅವತರಿಸೆ । ಮನುಗಳಲಿ ಮುನಿಗಳಲಿ ಮಾನವರುಗಳಲ್ಲಿ । ನಿನ್ನಂಥ ಸರಿಗಾಣೆ ನಿನಗೆ ನೀನೆ ಸರಿ ಪುರಂದರವಿಠಲ ॥ ೬ ॥

**ಅಟತಾಳ** ॥ ಅಂಜನೇಯನ ಕೂಡಿಕೊಂಡು ಬಂದು । ಭುಂಜಿಸಬೇಕೆಂದು ರಾಮ ಕರೆಯಲಂದು । ಯೆಂಜಲ ಹರಿವಾಣವನೆತ್ತಿಕೊಂಡು । ಯೆಂಜಲನು ಣಗಲಿಸಿದ ಕಲಿಹನುಮ । ಕಂಜಾಕ್ಷ ಪುರಂದರವಿಠಲ ಯೆಂಜಲನಿತ್ತನು ಸಕಲ ದೇವತೆಗಳಿಗೆ ॥ ೭ ॥

**ಜತೆ** ॥ ಈರೇಳು ಲೋಕಂಗಳ ಪ್ರೇರಕನೆ ಭಕ್ತಪ್ರಿಯ । ಪುರಂದರವಿಠಲರೇಯಾ ॥ ೮ ॥

---

## ೨೩. ಕೃಷ್ಣಬಾಲಲೀಲೆ ಸುಳಾದಿ.

ರಾಗ ವರಾಳಿ.

**ಧ್ರುವತಾಳ** ॥ ಮಣಿಮೌಳಿ ಮುಲ್ಲೆಮಲ್ಲಿಗೆ ದಂಡೆ ಪಂಚದುಂಗುಲ್ಲು । ಉತ್ತುಮಾಂಗಾ ಮಕರಕುಂಡಲ ಜಲಜಪಾತ್ರ ಪಂಚದುಂಗುಲ್ಲು ಮೆರೆವ ಕರ್ಣ । ಅಹೊ ಕೌಸ್ತುಭ ಕಮಲಮಾಲೆ ಕಂಬುಕಂಠ ಸಿರಿಗಂಧ । ಶ್ರೀತುಲಸಿ ವಕ್ಷಸ್ಥಳ ಮುರುಗಡಗ ಖಡ್ಡೆಯ ಕಂಕಣ । ತೊಡರು ಕರಚರಣ ಹೇಮವಸನ ಶ್ಯಾಮಲಾ ಕೋಮಲಾಂಗ । ಅಹೋ ಗೋಪಿಯರ ಮೋಹಿಸುತ್ತಿದೆ । ಅಹೋ ಜಗಜನರ ಪಾಲಿಸುತ್ತಿದೆ । ಅಹೋ ಪುರಂದರವಿಠಲನ ಬಾಲಲೀಲೆ ॥ ೧ ॥

**ಮಟ್ಟೆತಾಳ** ॥ ಪೊಂಬಟ್ಟೆಯ ಮೇಲೆ ಕಾಂಚಿದಾಮದ ಗುಡಿಯ ಸುತ್ತಿ । ಅಂಬುಜನಾಭನ ಯೆಳೆದೆಳೆಗಳಿಗೆ ಮುಕುಟಕ್ಕೆ ಸುತ್ತಿಕೊಂಡು ಕೊಂಬು ಕೊಳಲು ತುತ್ತುರಿ ವಾರಿ ಕಹಳೆ । ಭೊಂ ಭೊಂ ಝುಂ ಝುಂ ಯೆಂಬೊ ರಾಮಕೃಷ್ಣ ಗೋಪರ್ಗಳು । ಸಂಭ್ರಮದಿ ಸೂಲಿ ಸಂತ್ರಾ ಜಂಬು ಭೇರಿ ಶಂಖ ಅಂಬುಜಭವ ಸುರಮುನಿ ವಂದಿತ । ಕಂಬುಗ್ರೀವಾ ತಿರುವೆಂಗಳಪ್ಪ ಪುರಂದರವಿಠಲ ॥ ೨ ॥

**ಅಟತಾಳ** ॥ ಜಯ ಜಯ ಶ್ರೀನಾರಸಿಂಹ । ಜಯ ಜಯತು ಭಯ ನಿವಾರಣ । ಜಯ ಜಯ ಶ್ರೀದಿವ್ಯಸಿಂಹ ಪುರಂದರವಿಠಲ ॥ ೩ ॥

**ಝಂಪೆತಾಳ** ॥ ಅಹಂಕಾರ ಮಮಕಾರವಳಿಯದೆ ವಿಹಂಗಪತಿ ಸಿಲುಕುವನೆ ಮರುಳೆ । ಕಾಮಕ್ರೋಧ ಬಿಡದನಕ ಪರಬೊಮ್ಮ್ಯಾದನುವೆತ್ತ ತಾನೆತ್ತ ಮರುಳೆ । ಹರಿಶರಣರ ಪಾದಪದುಮಕ್ಕೆರಗದೆ । ಪುರಂದರವಿಠಲ ತಾ ಸುಲಭನೆ ಮರುಳೆ ॥ ೪ ॥

**ಏಕತಾಳ** ॥ ವಾಮನ ವಾಸುದೇವ ಪದುಮನಾಭ । ಶ್ರೀವತ್ಸಲ ಶ್ರೀಧರ ಶ್ರೀರಮಣ । ಭೂರಮಣ ಅಚ್ಯುತಾನಂತ ಗೋವಿಂದ । ನಾರಾಯಣ ಹರಿ ಹರಿ ಪುರಂದರವಿಠಲ ನಾರಾಯಣ ॥ ೫ ॥

**ಜತೆ** ॥ ಕಾಯ ಕರಣಂಗಳಿಗೆ ಜೀವ ಪ್ರಾಣಯಿತ್ತು ಯೆನ್ನ ನೀ । ಕಾಯೋ ಕೊಟ್ಟೂ ಪುರಂದರವಿಠಲ ದಮ್ಮಯ್ಯಾ ಕಂಡ್ಯಾ ॥ ೬ ॥ ಪ್ರೀ ॥

---

## ೨೪. ಸುಳಾದಿ.

### (ಉಂಬುತ್ತೂರ ಚೆನ್ನಯ್ಯ ಸುಳಾದಿ.)

---

ರಾಗ ಶಂಕರಾಭರಣ.

**ತ್ರಿಪುಟತಾಳ** ॥ ಅಚ್ಯುತ ಸುಳಿದ ಯೆನ್ನ ಕಣ್ಣಮುಂದೆಯವ್ವ । ಕಸ್ತೂರಿಮೃಗದಂತೆ ಘಮಘಮಿಸುತಾ ॥ ಅನಂತ ಸುಳಿದ ಯೆನ್ನ ಕಣ್ಣ

ಮುಂದೆಯವ್ವ । ದಿವಾಕರ ಕಿರಣದಂದದಿ ಬೆಳಬೆಳಗುತ್ತಾ ॥ ಮಾಧವ ಸುಳಿದ ಯೆನ್ನ ಕಣ್ಣ ಮುಂದೆಯವ್ವ । ಸಗುತ ನಲಿದು ಮೇಲುವರಿದೆನ್ನ ನಪ್ಪುತಾ । ಯೇನೆಂಬೆ ಯೇನೆಂಬೆ ಯೇನೆಂಬೆ ಅವ್ವ । ಯೆನ್ನ ಸೂರೆಗೊಂಡ ಸೆರೆಗೊಂಡ । ಉಂಬುತ್ತೂರ ಚೆನ್ನಯ್ಯ ಪುರಂದರವಿಠಲ ॥ ೧ ।

**ಝಂಪೆತಾಳ** ॥ ಮಧುರಾಪಟ್ಟಣದ ರಾಜಬೀದಿಯಲ್ಲಿ ಧಾಮ । ಸುಧಾಮರೆಲ್ಲ ಕೂಡಿ ಕೈಪ್ಪೊದು ನಗರೆ ಕುಬುಜೆಯು ಕೂಡೆ ಕಾಕುಪೋಕ ಮಾತು । ಸನ್ನೆಪನ್ನೆ ನೋಟ ಕೆನೆಲಿಟ್ಟ ಉಂಬುತ್ತೂರ ಚೆನ್ನಯ್ಯ ಪುರಂದರವಿಠಲ ॥ ೨ ॥

**ಆದಿತಾಳ** ॥ ಆರಾ ಮಡಿಯನುಟ್ಟು ಆರಾ ಗಂಧವ ತೊಟ್ಟು । ಆರಾ ಪೂಗಳ ಮುಡಿದ ಬಲ್ಲಿದರಿಗೆ ಬಟ್ಟೆಸಪಾರವೆಂಬಂತೆ । ಉಂಬುತ್ತೂರ ಚೆನ್ನಯ್ಯ ಪುರಂದರವಿಠಲ ॥ ೩ ॥

**ಅಟತಾಳ** ॥ ಸುಳಿದರೆ ಸುಂಕವ ಕೊಂಬ ಜಾಣರಾಯ ಹರಿಯಲ್ಲಿ ವಾರು ಪೇಳೆ । ಕೇಳೆಲೆಯವ್ವ ಉಂಬುತ್ತೂರ ಚೆನ್ನಯ್ಯ ಪುರಂದರವಿಠಲ ॥ ೪ ।

**ಏಕತಾಳ** ॥ ಕೊಂಬು ಕೊಳಲು ತುತ್ತುರಿ ಮೌರಿ ಸಂಭ್ರಮದಲ ಗೋಪಾಲರು ಕೂಡಿ । ಭೊಂ ಭೊಂ ಭೊಂ ಭೊಂಭೆನುತ್ತ । ಸಂಗಮ ಸದನಿಸಾ । ತುತ್ತುರು ತುರುರೆನುತಲಿ ಝೊಂ ಝೊಂ ಝೊಂ ಝೊಂ ಝೊಂ ಝುಮೆನುತಾ । ಉಂಬುತ್ತೂರ ಚೆನ್ನಯ್ಯ ಪುರಂದರವಿಠಲ ॥ ೫ ॥

**ಜತೆ** ॥ ನಿನ್ನ ಪಾದವೆ ಗತಿ ಯೆನ್ನ ನೀ ಸಲಹಯ್ಯ । ಉಂಬುತ್ತೂರ ಚೆನ್ನಯ್ಯ ಪುರಂದರವಿಠಲ ॥ ೬ ॥ ಪ್ರೀ ॥

## ೨೫. ಪಾಂಡುರಂಗವಿಟ್ಠಲ ಸುಳಾದಿ.

**ಧ್ರುವತಾಳ** ॥ ನರಹರಿ ಅಂದಿಂದೆಂದು ಮಂದರಗಿರಿಧರನೆ । ತಂದೆಯಂತೆ ತಾಯಿಯಂತೆ ಬಂಧುಗಳಂತೆ । ಬಂದ ಬಂದ ದುರಿತ ವೃಂದವನ್ನು ತನ್ನ ಪಾದದಿಂದೊದೆದು । ಪಕ್ಕದೊಳಿಟ್ಟು ಅಗಲದಿಹ ತನ್ನವರ । ಇಂತೆಂದು

ನಂಬಿದವರಿಗೆ ಕೈಯಲಿ ಕೈವಲ್ಯ । ಆನಂದವನೀವೆನೆಂದು ತುಂಗಭದ್ರೆ ತೀರ ದಲ್ಲಿ ಬಂದು ನಿಂದಾ ಇಟ್ಟಿಗೆಯ ಮೇಲೆ । ಸಿರಿಗುರು ಪುರಂದರವಿಠಲ ಪರ ಬೊಮ್ಮನಾವ್ಯೆದುವಾ ಬನ್ನಿ ॥ ೧ ॥

**ಮಟ್ಟೆತಾಳ** ॥ ಮುನಿ ಪುಂಡರೀಕ ತನ್ನ ಜನನಿ ಜನಕರಲ್ಲಿ ಹರಿಯ ಅನುಮಾನವಿಲ್ಲದರ್ಚಿಸೆ । ಅನಿಮಿಷಾಧೀಶ ಬಂದು ಆತಗನೇಕ ವಾದ । ನೆನವರಿಗೆ ಕಾಮಧೇನು ಗುರು ಪುರಂದರವಿಠಲ ॥ ೨ ॥

**ತ್ರಿಪುಟೆತಾಳ** ॥ ತನ್ನವರು ಮಾಡಿದ ಪೂಜೆ ಅಲ್ಪವಾದರೆ ಕೈಕೊಂ ಬ । ಇನ್ನೇನೋ ಹರಿಯ ಸ್ವಭಾವ । ಅನ್ಯರು ಮಾಡಿದ ಪೂಜೆ ಬಹಳ ವಾದರು ಕೈಕೊಳ್ಳ । ತನ್ನ ತಾನೆ ಬಲ್ಲ ಸಿರಿಗುರು ಪುರಂದರವಿಠಲ ॥ ೩ ॥

**ಅಟೆತಾಳ** ॥ ದರಿದ್ರರೆನಬಹುದೆ ಹರಿದಾಸರ ದರಿದ್ರರೆನಬಹುದೆ । ಸಿರಿವಂತರೆನಬಹುದೆ ಹರಿದ್ರೋಹಿಗಳ ಸಿರಿವಂತರೆನಬಹುದೆ । ಹರಿದಾಸರ ಮೇಲುಳ್ಳ ಕರುಣಾವು ಶಿರಿದೇವಿಯುರ ಮೇಲಿಲ್ಲದಾಗ....................

**ಏಕತಾಳ** ॥ ಆರೋಪಿತವಾದ ಜ್ಞಾನ ವೈರಾಗ್ಯ ಭಕುತಿಗಳಿಂದ ಲ್ಲದೆ । ಶ್ರೀರಮಣನು ಮೆಚ್ಚುವನೆ ಹೇಳು ಮರುಳೆ । ಮುಖ ಪ್ರಸಾದ ತೀರ್ಥ ದಲ್ಲಿ ಆಲೋಡ್ಯವಿಲ್ಲದನ್ನ ತಾ । ಶ್ರೀರಮಣನು ಮೆಚ್ಚುವನೆ ಹೇಳು ಮರುಳೆ । ಸಿರಿಗುರು ಪುರಂದರವಿಠಲನ್ನ ವೈಮರೆಯದಿರನಕಾ ॥ ೫ ॥

**ಜತೆ** ॥ ಜ್ಞಾನ ವೈರಾಗ್ಯ ಭಕುತಿಯಿಲ್ಲದೆ । ಸುಲಭನೆ ಗುರು ಪುರಂದರವಿಠಲರೇಯಾ ॥ ೬ ॥

## ೨೬. ಸುಳಾದಿ.

**ಧ್ರುವತಾಳೆ** ॥ ಒಂದಪರಾಧವೆ ಹರಿ ಹರಿ । ಯೆರಡಪರಾಧವೆ ಹರಿ ಹರಿ । ಒಂದೊಂದು ಪರ್ವತ ಯೆಂಥಾದ್ದೋ ದೇವಾ । ಒಂದನಂತ ಸಾಸಿರ ಲಕ್ಷ ಕೋಟಿ ಅಪರಾಧ । ಒಂದಾಗಿ ನೋಡದೆ ಹರಿ ನೀ ಹಿಂದಿಕ್ಕಿಕೊಂಡು

ಕಾದೆ ಹರಿ ಹರಿ । ಯೆಂದೆಂದೆಂದು ನಿನಗೆ ನಾ ಸಲೆ ದೂರಿಹೋದೆ ಪು । ರಂದರವಿಠಲಾ ಕೃಪಾಸಿಂಧುವೆ ನೀನಲ್ಲದುಂಟೆ ॥ ೧ ॥

**ಮಟ್ಟೆತಾಳ** ॥ ಆನೆಂತಾಡುವೆ ಆನೆಂತು ಪಾಡುವೆ । ಆನೆಂತೆಂತ ಮನಬಂದಂತೆ ನಡವೆ ನುಡಿವೆ । ವಡನಾಡಿಸಿಯಾಗಿಪ್ಪೆ ಪುರಂದರವಿಠಲ ನೊಬ್ಬನೆ ಕಾಣಿರೊ ॥ ೨ ॥

**ತ್ರಿಪುಟತಾಳ** ॥ ಶ್ರುತಿಗಳವೆ ಸ್ಮೃತಿಗಳವೆ ಯತಿತತಿವರಕೋಟಿ ಗಳ ಮಂತ್ರಗಳವೆ । ಇದೇನಯ್ಯ ಅತರ್ಕ್ಯನಪ್ರಮೇಯನಾಗಿ ಪುರಂದರವಿಠಲ ವಲಿದವರಿಗಳವಡುವೆಯಲ್ಲದೆ ॥ ೩ ॥

**ಅಟತಾಳ** ॥ ಉತ್ತುಂಗ ತತ್ವಾ ಉತ್ತುಂಗ ಸತ್ವಾ । ಉತ್ತುಂಗ ನಾವಮಾ ಉತ್ತುಂಗ ಮಹಿಮಾ । ತುರಿಯ ತುರಿಯ ತುರಿಯಾರೀತ । ಉತ್ತುಂಗ ಪಾಂಡುರಂಗ ಉತ್ತುಂಗ ಪುರಂದರವಿಠಲರೇಯಾ ॥ ೪ ॥

**ರೂಪಕತಾಳ** ॥ ಹರಿಯುರಿಗೆ ಗುರುಗಳಿಗೆ ದೈವಜ್ಞರುಗಳಿಗೆ । ಶಿ ರನ್ನದನ್ಯಥಾ ಹರಿಭಕುತಿ ನಿಜಭಕುತಿ ಪುಟ್ಟುವುದೆ । ಪುರಂದರಾವಿಠಲಾ ಹಿರಿಯರ ಕೈಪಿಡಿದವನಯ್ಯಾ ॥ ೫ ॥

**ಆದಿತಾಳ** ॥ ಸಾತ್ವಿಕರ ದೈವವೆ ನಿನ್ನ ಸಾತ್ವಿಕ ಭಕುತಿ ದೊರೆ ಗೊಂಬುದಲ್ಲದೆ । ಸಾತ್ವಿಕಪ್ರಿಯ ಪುರಂದರವಿಠಲರೇಯಾ ॥ ೬ ॥

**ಏಕತಾಳ** ॥ ಸನಕಸುನಂದನ ಸನಾತನ ಸನತ್ಕುಮಾರಾ ಸನತ್ಸು ಜಾತಾ । ಹನುಮಂತ ತುಂಬುರು ನಾರದಾದಿಗಳು ಅನೇಕ ವಿಧದಲಿ ಪಾಡು ತಿರೆ । ಅನರ್ಘ್ಯ ರತುನಾದಿಗಳು ಪಾದಾರ್ಚನೆಗೈಸಿರಿಬರೆ ನೋಡೆ ನುಡಿಸಿ । ಅನೇಕ ವಿಧದಲಿ ಪಾಡುತಿರೆ ಇದೇನು ಮಹಿಮೆ । ಇದೇನು ಘನತೆಯೊ ನೀನೆ ಬಲ್ಲೆ ಪುರಂದರವಿಠಲಾ ॥ ೭ ॥

**ಜತೆ** ॥ ವೈಕುಂಠಪುರದಲಿ ಯೋಗಿಹೃದಯದಲ್ಲಿ ಸೂರಿಯನಲ್ಲಿ ನೀ ನಿಪ್ಪೆ ಕಂಡ್ಯಾ । ವೈಕುಂಠಪ್ರಿಯ ಪುರಂದರವಿಠಲ ॥ ೮ ॥



## ೨೭. ಮುಕ್ತಿಸುಖ ಸುಳಾದಿ.

ರಾಗ ಮೆಚ್ಚುಬಹುಳ.

**ಧ್ರುವತಾಳ** ॥ ಮುಕುತಿಸುಖದೊಳು ಪರಮ ಸುಖವೆಂದಲಿಯದ । ಸರ್ವ ವಿಷಯಭೋಗಂಗಳು ಅಲ್ಲಿ ಅಪ್ರಾಕೃತವಾದ । ಶುದ್ಧ ಸಾತ್ವಿಕರು ಕೃತಿಸಂಬಂಧದಿಂದ ಯಿರೆ । ಸೃಷ್ಟಿಯನು ನಿರ್ಮಾಣಿಸಿ ಸುಖಭೋಗ ಕೆಂತೊ । ಅನುಭವವಾಗುವಂತೆ ಸರ್ವ ಜೀವರಿಗೆ ಮುಕುತಿ ಸುಖದೊಳು । ಅತಿಸೂಕ್ಷ್ಮ ಜೀವರು ಅದರೊಳು ಮೂರು ಬಗೆಯಾದ । ಉತ್ತಮರು ಮಧ್ಯಮರು ಅಧಮರು । ಕಡಮೆ ಸೂಕ್ಷ್ಮಗಳುಳ್ಳ ಇವರಿಗೆ ಸೂಕ್ಷ್ಮದಲ್ಲಿ ಸುಖಾನುಭವವೆಂತೊ । ದೇವತೆಗಳಲ್ಲದೆ ಕೆಲ ಮನುಮುನಿಗಳು ಮತ್ತೆ ಕೆಲವು ಜೀವರಿಗೆ । ಭೋಗ ಬೇಕೆಂದರೆ ಇದ್ದ ಸೃಷ್ಟಿಯಾದ ಶರೀರಗಳಿಂದ ಭೋಗಿಪರು । ನೀಚಜೀವರಿಗೆ ಶರೀರಯೋಗ್ಯತೆಯಿಲ್ಲದಿದ್ದರೆ ಅತಿಸೂಕ್ಷ್ಮ ವಾಗಿಯೆಂತು ಜೀವಕ್ಕೆ ಭೋಗಾನುಕೂಲ । ಅಂಥಾಯಿದ್ದ ಸೃಷ್ಟಿಯಿಂದ ಅನಾದಿ ಸುಖವಿತ್ತು ಪಾಲಿಪ ಗುರುಪುರಂದರವಿಠಲರೇಯಾ ॥ ೧ ॥

**ಮಟ್ಟೆತಾಳ** ॥ ತ್ರಿವಿಧಕರ್ಮಂಗಳು ನಿನ್ನಾಧೀನವಾಗಿ । ಅನಂತ ಕಾಲದಲಿ ಪರಬೊಮ್ಮಾದಿಗಳು । ನಿನ್ನ ದಾಸರೆಂಬ ತಾರತಮ್ಯದಿಂದ । ಶ್ರವಣ ಮನನ ನಿದಿಧ್ಯಾಸನಗಳನ್ನು । ಮಾಡುತಲಿರಲಾಗಮ ಸಂಚಿತಗಳ ಕಳದು । ಪ್ರಾರಬ್ಧ ಭೋಗವು ಅನುಭವಿಸದಲ್ಲದೆ । ಕೂಡದ ಲಕ್ಷಣ ಕಾರಣ ಸಂವತ್ಸರದ ಭೋಗವು । ವಂದುದಿನದಲ್ಲಿ ಕಡೆಗೈದುವಂತೆ । ಶ್ವಾನ ಸೂಕರಾದಿ ಜನ್ಮಂಗಳು ಕ್ಲೃಪ್ತಿಗೆ ಕಡಿಮೆಯಾಗದು ॥ ಅಂದೆ ಪುಟ್ಟಿ ಅಂದೆ ಮೃತವಾಗಿ ಜನುಮನೀಗುವ ನಿನ್ನ । ಪರಮಾನುಗ್ರಹದಿಂದ ಸ್ವರೂಪಸುಖವನ್ನು ವ್ಯಕ್ತ ಮಾಡುವಲ್ಲಿ ನೀ ಕಾರಣನಾದಕಾರಣ । ಈಪರಿಯಲಿ ಕಡೆಗೈದಿಸುವೆ ಗುರು ಪುರಂದರವಿಠಲ ಮುಕುತಿಪ್ರದ ನೀನೂ ॥ ೨ ॥

**ರೂಪಕತಾಳ** ॥ ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯ ಸಾರ್ಷ್ಟಿಯಂಗಳು । ಯೋಗ್ಯಜೀವರಿಗೆ ಆಲೋಕದಲಿಪ್ಪುದು । ಸಾಲೋಕ್ಯ

ವೆಂಬುದು ಪಟ್ಟಣದ ಸಮೀಪದಲಿಪ್ಪುದು। ಸಾಮೀಪ್ಯವೆಂಬುದು ಶಂಖ ಚಕ್ರ ಗದೆ ಪದುಮಧರನಾಗಿ ಸರ್ವರು। ಸಾರೂಪ್ಯವೆಂಬುದು ಮುಕುತಿಸಮಪು ಹರಿಯು ವಾಯುಗಳಲ್ಲಿ ತತ್ವಾಭಿಮಾನಿ ದೇವತೆಗಳಿಗೆ। ಸಾಯುಜ್ಯವೆಂಬ ಮುಕುತಿಯು ಹರಿಸರ್ವಾಂಗದಿ ಇಪ್ಪುದು ಚತುರ್ಮುಖಗೆ। ಸಾರಿಷ್ಟಿ ಯೆಂಬುದು ಪಂಚವಿಧ ಮುಕುತಿಯೆಂಬದು। ಋಷಿ ಮನುಜೋತ್ತಮರು ಚತುರ್ಮುಖನಿಂದ ಕೂಡಿ। ಶ್ರೀವಾಸುದೇವ ಶ್ವೇತದ್ವೀಪವಾಸ ಸಂದರುಶನ ದಿಂದ। ಇದ್ದಾವರಕಗಳ ಬಿಟ್ಟು ಸಮುದಾಯದಿಂದ ಕ್ರಮಭಾಗವಾಗಿ: ಚತುರ್ಮುಖನಿಂದ ನಾರದ ಪರಿಯಂತ ಇಪ್ಪ ಆವರಕನಸೀಗೆ। ಮುಕುತರಾ ದರು ಮನುಜೋತ್ತಮರಿಂದ ಮೊದಲಾಗಿ ತೃಣಜೀವರಿಂದ ಕಡೆಯಾಗಿ। ಜೀ ವಾಚ್ಛಾದಕ ಪರಮಾಚ್ಛಾದಕವೆಂದು ಬೇರಿಪ್ಪುದು।ಜೀವಾಚ್ಛಾದಕವನು ಸಂ ಹರಿಸೆ ಪರಮಾಚ್ಛಾದಕ ಕಡೆಕಡೆಗೊತ್ತಿ ಮುಕುತರ ಮಾಡುವೆ। ಅನಾದಿ ಕಾಲದಿ ಮುಕುತಿದಾಯಕ ಗುರುಪುರಂದರವಿಠಲ ಆಲೋಕದಲಿಪ್ಪುದು॥ ೩॥

**ಝಂಪೆತಾಳ** ॥ ಕಾಲಚಕ್ರದಿಂದ ಬೆಳಗುತಿಪ್ಪ ಬೊಮ್ಮಾಂಡದೊ ಳು। ಚಕ್ರಾಧಾರವಾಗಿ ತಿರುಗುತ್ತ ಬರಲೂ। ಅಪ್ರಾಕೃತವಾದ ಶ್ವೇತದ್ವೀ ಪವು ಅನೇಕ ಉನ್ನತವಾದ। ಗೋಪುರಪ್ರಾಕಾರದಿಂದ ವೊಪ್ಪುವ ಪಟ್ಟಣಕ್ಕೆ ಸಂಬಂಧವಾಗುವ ಅಲ್ಲಿ ನಿನ್ನ। ಇಷ್ಟ ಮಾತ್ರದಿ ಧಗಧಗನೆ ಉರಿವ ಉರಿ ಯೊಳು ಕಾಷ್ಟವ ತಿರುಗಿಸಿದಂತೆ। ಅತಿವೇಗದಿಂದ ತಿರುಗುವ ಕಾಷ ಯೆಂತು ಲಗ್ನವಾಗುವದಿಲ್ಲ ಅಂತು ಅಪ್ರಾಕೃತ। ತನ್ನ ಶ್ರೀಭಾಗದಿಂದ ಒಪ್ಪುವುದು ಸರ್ವವು ನಿನ್ನಾಧೀನ। ನಿನ್ನ ಇಚ್ಛೆಬಂದಂತೆ ಶಿರಿಅಜಭವಾದಿ ಗಳು ಅನುಸರಿಸಿಕೊಂಡಿಪ್ಪರೈ ಗುರುಪುರಂದರವಿಠಲ॥ ೪॥

**ತ್ರಿಪುಟಿತಾಳ** ॥ ಇಲ್ಲೆಂಥಾ ಸುಖಗಳುಂಟು ಅಲ್ಲೆಂಥ ಸುಖಗ ಳುಂಟು। ದುಃಖವಿಲ್ಲಲ್ಲಿ ಸವಾರ ಸುಖವುಂಟು। ಲೋಕಗಳಲ್ಲಿ ನಾಶವುಂಟು ದಿನಕೊಂದು ಬಗೆಯಾಡಿಯಾಡಿ ಸುಖವಾಗಿ। ನಾಶವಿಲ್ಲದೆ ಅಪ್ರಾಕೃತವಾದ ಸುಖವನನುಭವಿಸುತ್ತ। ಕ್ರಮದಿ ತಿರುಗುವ ಅಲ್ಲಿ ತನ್ನ ತನ್ನಯ। ಚಾಮರ ಗಳಿಂದ ಪೀತಾಂಬರ ಶಂಖ ಚಕ್ರಗಳಿಂದೊಪ್ಪುವ। ನಾಶವಿಲ್ಲದ ಪುಷ್ಪವಾ ಸನೆಯಿಂದಲೊಪ್ಪುವ ಗುರು ಪುರಂದರವಿಠಲಾ॥ ೫॥

**ಅಟ್ಟತಾಳ** ॥ ಅಲ್ಲಿ ವನಗಳುಂಟು ಅಪ್ರಾಕೃತವಾದ । ಫಲಪುಷ್ಪಗಂಧಲೊಪ್ಪುದು । ಪಕ್ಷಿಜಾತಿಗಳು ಅತಿವಿಲಕ್ಷಣವಾದ ಮುಕುತರು । ತಮ್ಮ ಜಾತಿಗಳಲ್ಲಿ ಸಮುದಾಯದಿಂದ ಸಾಮಗಾಯನವನ್ನು । ಖಿಲಿಖಿಲಿ ಶಬ್ದದಿಂ ರಚಿಸುವ ನುಡಿಗಳು । ಮುಕ್ತರು ಬಂದು ಜಲಕ್ರೀಡೆಯಂ ಮಾಡಿ ಕುಳಿಕುಳಿತು ಸುಖಿಪರು । ಇಂಥಾ ಸುಖ ಬೇಕಾದರೆ ನಿಜಗುಣವಾ ಬಿಟ್ಟು । ಪರಲೋಕಸುಖವೀವ ಗುರುಪುರಂದರವಿಠಲನ ಭಜಿಸುವಾ ॥ ೬ ॥

**ಏಕತಾಳ** ॥ ಅಂದು ಗೋಕುಲದಲ್ಲಿ ಗೋಪಾಲರಾದ । ಅನಿಮಿಷರು ಸಾರೂಪ್ಯವ ಪಡದರು । ಅಂದು ಗೋವುಗಳಾಗಿ ಸಾಧನವನು ಮಾಡಿ । ಸಾಲೋಕ್ಯವೆಂಬ ಮುಕುತಿಯ ಪಡದರು । ಅಂದು ನಿನ್ನ ಕೂಡಾಡಿ ಕೆಲಕೆಲರು । ಸಾಮೀಪ್ಯವೆಂಬ ಮುಕುತಿಯ ಪಡದರು । ಅಂಗ ಸಾಯುಜ್ಯ ಸರ್ವಾಂಗದಲ್ಲಿ ಅಜಗಿತ್ತೆ । ಸಾರಿಷ್ಟ್ಯಿಯು ಒಂದೊಂದವಯುವಗಳಲ್ಲಿ । ತತ್ವಾಭಿಮಾನಿ ದೇವತೆಗಳಿಗೆ ಸಾಯುಜ್ಯವಿತ್ತು ಸಲಹಿದೆ । ಅನುಪಮ ಗುಣನಿಧಿಯು ಗುರುಪುರಂದರವಿಠಲ ಮುಕುತರ ಶಿರೋಮಣಿ ॥ ೭ ॥

**ಜತೆ** ॥ ಎಂದೆಂದು ಮುಕುತಿ ಬೇಕೆಂದವರ್ಗೆ । ಜೀವರ ತಾರತಮ್ಯ ತಿಳಿದು ಗುರುಪುರಂದರವಿಠಲ ಮುಕುತಿಯನೀವಾ ॥ ೮ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೨೮. ಲಯಸುಳಾದಿ.

ರಾಗ ಶಂಕರಾಭರಣ.

**ಧ್ರುವತಾಳ** ॥ ಗಜದಲ್ಲಿ ಗಜರೂಪನಾಗಿ । ಅಶ್ವದಲ್ಲಿ ನೀನು ಅಶ್ವರೂಪನಾಗಿ । ದೇಹಾಂತರ್ಯಾಮಿ ದೇಹದಲ್ಲಿ । ಯೆಂಥಾ ಅವಯವಗಳಂಥಾ ರೂಪ । ಚಲನೆಶಕ್ತಿಯಲ್ಲಿ ದೇಹಪ್ರಮಾಣ ಯೆಂಥಾದೊ ಅಂಥ ರೂಪವೆ ಗಜದಲ್ಲಿ । ಗಜರೂಪನಾಗಿ ಕಾಲನಾಮಕನಾಗಿ ಕಾಲಾಗ್ನಿಯೋಪಾದಿಯಲಿ । ನೀ ನುಂಗುವೆ ಭುವನಂಗಳ ತಡವಿಲ್ಲದೆ । ಮುಕ್ಕಳಾಟಿಕೆ

ಮನೆಯಂತೆ ಇಚ್ಛೆಯಿಂದಲಿ ಸೃಜಿಸುವೆ ಎಂದಾರೆ ಭಕುತರಾಧೀನನಾಗಿ । ಪರಿಪರಿಯಲಿ ಮತ್ಸ್ಯಮೂರುತಿ ಗುರುಪುರಂದರವಿಠಲರೇಯಾ ॥ ೧ ॥

**ಮಟ್ಟೆತಾಳ** ॥ ನಿಧಿಯೆನಗುಂಟೆಂದು ನಿಧಿಯೆನ್ನದೆಂಬರು । ನಿಧಿಯಾ ನೀನು ಆಳುವೆ ನಿಧಿಯೆಂಬ ಜಗಪ್ರಕೃತಿಯಿಂದ । ಸರಸಿಜಭವರಿಗೆ ಪರಿಮಿತವಾದ ಕಾಲದಲಿ ನಿಧಿಯನೀವ ಕಾರಣ ನೀನು ॥ ನಿನ್ನ ಪ್ರೇರಣೆಯಿಂದ ಅಜಭವ ಇಂದ್ರವಸು ದಿಕ್ಪಾಲಕರಿಗೆ । ನಿನ್ನ ಪ್ರೇರಣೆಯಿಂದ ಸ್ವರಮಣ ನೀನೂ । ಸುರರಿಗೆ ನೀನಿತ್ತೆ ಅಪಾರ ಗುಣನಿಧಿ ಗುರುಪುರಂದರ ವಿಠಲ ॥ ೨ ॥

**ಅದಿತಾಳ** ॥ ರತ್ನನಾಳಗಳುಂಟು ಪರಿಮಿತಿ ಉಂಟು । ಪರಾಧೀನತೆ ಉಂಟು ನಿರುಪಾಧಿಕವಾಗಿ । ಅಧೀನವಲ್ಲದ ಸರ್ವಾಧಾರಾ ನೀನೂ । ಅಜನಶತಾಬ್ದ ಹನ್ನೆರಡುವರೆ ವರುಷವಿರೆ । ಹಗಲೆ ಆರಂಭಲಯದಿ । ಮಾನುಷನೂರುವರುಷ ಆಧೀನವಲ್ಲವೆ ಸರ್ವಾಧಾರ ನೀನೂ । ಅನಾವೃಷ್ಟಿಯಿಂದ ಸಮಸ್ತ ಪ್ರಾಣಿ ಕ್ಷಯವೂ । ಅನಂತ ತೇಜದಿಂದ ಸೂರ್ಯ ಶತವತ್ಸರ ತಪಿಸೆ । ಪಾತಾಳದಲ್ಲಿದ್ದ ಶೇಷಮುಖದಿಂದಾ । ಸಂವೃತಾಗ್ನಿ ಪೊರವಂಟು ಸಮಸ್ತವನು ದಹಿಸಿ । ಪ್ರಚಂಡವಾಯು ಶತವತ್ಸರ ಬೀಸೇ । ಸಂವರ್ತ ಮೇಘ ಶತವತ್ಸರ ಮಳೆಗರೆಯೆ । ಕರಿಯ ಸೊಂಡಿಲ ಪೋಲ್ವ ಧಾರೆಯಿಂದ ಕೆಡಲು । ಸರ್ವಾಧಾರಕ ಗುರುಪುರಂದರವಿಠಲ । ಸರ್ವಾಧಾರ ನೀನೂ ನಮ್ಮ ಮಹಾಪ್ರಳಯವಿಭಾಗಾ ॥ ೩ ॥

**ರೂಪಕತಾಳ** ॥ ಪೃಥಿವಿಗೆ ಅಪ್ಪು ಅಪುವಿಗೆ ತೇಜ । ತೇಜಸ್ಸಿಗೆ ವಾಯು ಮರುತಗೆ ಆಕಾಶ । ಆಕಾಶಕೆಂದ್ರಿಯ ರೂಪವಾದ । ಮನಸು ವೈಕಾರಿಕ ತೈಜಸ ದೇವತೆಗಳು । ಮನಸು ತತ್ವದ ಲಯವು । ಮಹತ್ತತ್ವ ತ್ರಯೋದಶಭಾಗದಿ ಕೂಡಿಪ್ಪುದು । ದ್ವಾದಶ ರಜಸಿನೊಳು ದಶಸತ್ವದಲಿಪ್ಪುದು । ಒಂದು ರಜಸು ರಜಸಿನಲ್ಲಿ । ಒಂದು ರಾಜಸ ತಾಮಸದಲ್ಲಿ । ತಾಮಸ ಒಂದು ಕೂಡಿಹುದು । ಮೂರುಭಾಗ ವಕ್ಷಸ್ಥಳದಲ್ಲಿಪ್ಪುದು । ಶ್ಯಾಮಲವಂತೆ ಸ್ಥಳ ಬಿಟ್ಟು ಮಹಾತತ್ವದಿ ಕೂಡಿಹುದು । ವಿಷಮವಸ್ಥೆ ಸೃಷ್ಟಿಯ ರಚಿಸುವ ಗುರುಪುರಂದರವಿಠಲಾ ॥ ೪ ॥

**ಝಂಪೆತಾಳ** ॥ ಸಾತ್ವಿಕ ಭಾಗಗಳ ಮಾಡಿ ನೀನು ಒಂದು ವರಹದ ತೂಕ । ಸೂಕ್ಷ್ಮವನು ಪೇಳಿದಾ ಸಾಸಿರ ವರಹದ ತೂಕ । ಸಾತ್ವಿಕ ಒಂದು ವರಹದ ತೂಕ ತಾಮಸವೂ । ತಾಮಸದ ಹತ್ತುಮಡಿ ರಾಜಸದಿಂದ ಬೊಮ್ಮನ ಶರೀರದಲಿಹವೂ । ಸಾತ್ವಿಕ ಭಾಗದೊಳು ಹತ್ತುಮಡಿಯೊಳಗೆ ಒಂದು ಭಾಗದಿ । ನೂರುಭಾಗದೊಳೊಂದೊಂದು ಹತ್ತುಮಡಿ ರಾಜಸಾ । ತಾಮಸಾವಸ್ಥೆಯಿಂತು ರುದ್ರನ ದೇಹಮೂಲಕೆ ಇದ್ದು । ತಾಮಸಭಾಗವಂ ಮೂರುಭಾಗವಂ ಮಾಡಿ । ಒಂದುಭಾಗದಿ ಪಂಚಭೂತಂಗಳನ್ನು ದಶೇಂದ್ರಿಯಂಗಳನ್ನೂ ಸೃಜಿಸಿ । ಇಂತು ತಾರತಮ್ಯಾನುಸಾರದಿ ಗುಣಭಾಗವಂ ಮಾಡಿ ಮೆರೆವ । ಗುರುಪುರಂದರವಿಠಲಯ್ಯಾ ॥ ೫ ॥

**ತ್ರಿಪುಟೆತಾಳ** ॥ ಉತ್ತಮರಲ್ಲಿ ನೀಚರ ಲಯ । ದೇವತೆಗಳಿಗೆ ಧನಪ ವಿಷ್ವಕ್ಸೇನಗೆ ವರುಣ । ವರುಣಗೆ ಚಂದ್ರ ಚಂದ್ರಗೆ ಅನಿರುದ್ಧ । ಅನಿರುದ್ಧ ಸನಕಾದಿಗಳಿಗೆ ಕಾಮ । ಕಾಮಗೆ ವಾರುಣಿ ವಾರುಣಿಗೆ ಶೇಷ । ಇದು ಶೇಷ ಮಾರ್ಗವಿದು ॥ ಅವಶಿಷ್ಟದೇವತೆಗಗ್ನಿ ಅಗ್ನಿಗೆ ಆದಿತ್ಯ । ಸೂರ್ಯಗಾಕಾಶಾ ಪೃಥಿವಿಗಭಿಮಾನಿಗೆ ಗುರು । ಮಾನುಷೋತ್ತಮರು ಸರ್ವ ಪಿತೃ ನಿಋುಋುತಿಗೆ ಯಮನು । ಯಮ ಕೆಲವು ಮನುಗಳು ಪ್ರಿಯವ್ರತನಿಗೆ ಸ್ವಾಯಂಭುವ । ಭೃಗ್ವಾದಿಗೆ ದಕ್ಷಸ್ವಾಯಂಭು ದಕ್ಷ ಗುರು ಮರುತಗಳಿಗೆ ಇಂದ್ರ । ಇಂದ್ರಗೆ ಸೌಪರ್ಣಿ ಸೌಪರ್ಣಿಗೆ ಗರುಡ । ಗರುಡಮಾರ್ಗವಿದು ॥ ಗರುಡ ಶೇಷಗೆ ವಾಣಿ ವಾಣಿಗೆ ಚತುರ್ಮುಖನು । ಆತಗೆ ಕಾಲಬೊಮ್ಮ ಬೊಮ್ಮಗೆ ಪುನ್ನಾಮಕನು । ಪುನ್ನಾಮಕಗೆ ಶಿರಿದೇವಿ ಶಿರಿದೇವಿಗೆ ಅಚ್ಯುತನ ಅತಿ ಸಾಮಿಾಪ್ಯದಿ ಲಯವು । ಬೊಮ್ಮಾದಿಗಳನ್ನು ಅವ್ಯಾಕೃತದಲ್ಲಿ ವಿರಜೆಯಲ್ಲಿ ಮುಳುಗಿಸಿ । ಲಿಂಗಶರೀರವ ಭಂಗವನ್ನು ಮಾಡಿ । ಉದರದೊಳಿಟ್ಟುಕೊಂಡು ಪ್ರಳಯೋದಕದಿ ಶಿರಿಯಾಗೆ । ಭೂದೇವಿ ವಟಪತ್ರವಾಗೆ । ಯೇಳುಕೋಟಿ ಯೋಜನ ಮಿತ ಬಾಲಕನಾಗಿ । ದುರ್ಗೆ ತಮವ್ಯಾಪಿಸಿ । ಆಲದೆಲೆಯ ಮೇಲೆ ಗುರುಪುರಂದರವಿಠಲ ಪವಡಿಸಲೂ । ಸಕಲ ಜಗವೆಲ್ಲ ಸುಷುಪ್ತಿಯನೈದಲೂ । ಮುಖ್ಯಪ್ರಾಣನೊಬ್ಬನೆಚ್ಚತ್ತಿಹನು ಗಡ । ಆ ರಾತ್ರಿಯು ನೂರುವರುಷ ಯೆಂಟನೆ । ಭಾಗದೊಳಿಂದಿರ

ದುರ್ಗೆ ಜಯುಜಯುವೆಂದು ಸ್ತುತಿಸಲು । ಶ್ರೀಸೃಷ್ಟಿಯ ಮಾಡೇನೆಂದು ಯೆಚ್ಚತ್ತನೂ ॥ ೬ ॥

**ಅಟತಾಳ** ॥ ಅನಾಲೋಚನೆಯಿಂದ ಲಕ್ಷ್ಮೀದೇವಿ ಅಂಗೈಯ ಗೆರೆಯಂತೆ ಕಾಂಬಳು । ಇಂತು ಬೊಮ್ಮಾಂಡದ ಒಳಹೊರಗುಳ್ಳಾ ದುಗುಣಂಗಳ ಪ್ರವಹದಿಂದ ಕಾಂಬೊಳಯ್ಯ ॥ ಅನಾಲೋಚನೆಯಿಂದ ಮಹತತ್ವ ಗುಣತ್ರಯ ಮೂಲದಿಂದ ಕಾಂಬನು । ಇದರೊಳೊಂದು ಲಕ್ಷ್ಮಮಿ ಕಂಡಂತೆ ನಿರ್ದುಷ್ಟದಿಂದ ಕಾಣುವಲ್ಲಿ ಭೇದ । ಅನಾಲೋಚನೆಯಿಂದ ತೆರೆಮರೆಯಿಂದ ಕಾಣುವಂತೆ ಈಶ ಗರುಡ ಶೇಷ । ಅನಂತಗುಣದಿಂದ ಬೊಮ್ಮನಿಂದ ಕಡಿಮೆ ಕಾಣುವರು । ಯೆಲ್ಲರಿಂದ ಧ್ಯಾನಿಸಿಕೊಂಡು ಅಪ್ರಮೇಯನಾಗಿ ಪ್ರೀತಿಯೆಂಬ ಶ್ರುತಿಪ್ರತಿಪಾದ್ಯ । ಗುರುಪುರಂದರವಿಠಲರೇಯ ಇಂತು ಬೊಮ್ಮಾಂಡ ಹೊರಗೊಳಗುಳ್ಳ ॥ ೭ ॥

**ಏಕತಾಳ** ॥ ಚತುರ್ಮುಖ ತನ್ನ ಸೃಷ್ಟಿವ್ಯಾಪಾರ ಕಾಲದಲ್ಲಿ । ಅನಂತಮೂರುತಿಗಳ ಉಪಾಸನೆಯಿಂದ ಕಾಂಬನೂ । ಧ್ಯಾನದಿ ಕುಳಿತು ಪರಿಮಿತವಾದ ಕಾಲದಲಿ । ಬಿಂಬಮೂರುತಿಯನು ಪ್ರವಾಹದಿಂದ ಕಾಂಬನೂ । ಗಿರೀಶನು ಯೆಂಟರೊಳೊಂದು ಭಾಗದಿ ಪ್ರವಾಹದಿಂದಲಿ ನೋಡುವ । ಜೀರ್ಣವಸ್ತ್ರ ತೆರೆಯಿಂದ ಕಾಂಬಂತೆ ಪ್ರವಾಹದಿಂದ ಇಂದ್ರಾದಿಗಳಿಗೆ । ಇಂದ್ರ ಕಾಮ ಗರುಡ ಶೇಷ ರುದ್ರರು ಅಪರೋಕ್ಷಕಾಲಾ । ಯೆಂಟು ಭಾಗವ ಮಾಡಲು ಒಂದು ಭಾಗದಿಂದ ಪ್ರವಾಹ । ಅಪರೋಕ್ಷದಿಂದ ಕಾಂಬರು ಸ್ಪಷ್ಟಾರ್ಥದಲ್ಲಿ ಭೇದ । ಗುರುಪುರಂದರವಿಠಲನ ಕೀರುತಿ ಯೋನೆಂಬೆ । ಧ್ಯಾನದಿ ಕುಳಿತು ಪರಿಮಿತವಾದ ಕಾಲದಲಿ ॥ ೮ ॥

**ಜತೆ** ॥ ಸನಕಾದಿಗಳು ಹಂಸೆಯಂತೆ ಕಮಲದಲಿ ನಲಿದಾ ಮೂರುತಿಯನು । ಮನುಜೋತ್ತಮರೆಂಬ ಮನ ಅಂಬರದಲಿ ಕೋಲುಮಿಂಚಿನಂತೆ ಥಳಥಳಿಸುವಾ ಗುರುಪುರಂದರವಿಠಲ ॥ ೯ ॥



# ೨೯. ಗುಣತಾರತಮ್ಯ ಸುಳಾದಿ.

ರಾಗ ಗೌಳ.

**ಧ್ರುವತಾಳ** ॥ ವಿಷ್ಣುಭಕ್ತಿ ಯೋಗ್ಯ ತಾರತಮ್ಯಂಗಳು । ಸ್ಥಾವರ ಜಂಗಮರ ಮೊದಲು ಮಾಡಿ । ಅವರಿಂದ ಸರ್ವಗುಣಾಧಿಕರು ಅವರಿಂದ ದೇವಗಂಧರ್ವರು ಶತಗುಣಾಧಿಕರು । ಅವರಿಂದ ನೂರುಯೆಂಟುಮಂದಿ ಅಲ್ಲದೆ ನೂರುಕೋಟಿ ಋಷಿಗಳು ನೂರುಗುಣಾಧಿಕರು । ಅವರಿಂದ ಚಿರಾಖ್ಯ ನಾಮ ಪಿತೃಗಳು ಐವತ್ತು ಗುಣದಿಂದಧಿಕರು । ಅವರಿಂದ ಕೃಷ್ಣಭಕ್ತರಾದ ಅಪ್ಸರಸ್ತ್ರೀಯರು ಯೆರಡು ಗುಣಾಧಿಕರು । ಅವರಿಂದ ಅಜಾನಜ ದೇವತೆಯರು ಓಜಸರು ಎಂಭತ್ತು । ಋಷಿಗಳು ಮತ್ತು ಗಂಧರ್ವರು ತುಂಬುರರು ಶತ । ಉರ್ವಶಿ ಮೊದಲಾದ ಶತಸ್ಥರು ಅಜಾನಜ ಯೆಂಬವರು । ಮತ್ತೆ ಅಗ್ನಿಪುತ್ರರಾದಾ ಕೃಶಾಶ್ವಾದಿಗಳು ಅಜಾನಜದೇವ ಸಮರೂ । ಇವರು ಹದಿನಾರು ಸಹಸ್ರ ನೂರುಮಂದಿ ಸ್ತ್ರೀಯರ ಸಂ ಗುರುಪುರಂದರಾವಿಠಲಾ ॥ ೧ ॥

**ಮಟ್ಟೆತಾಳ** ॥ ಕಶ್ಯಪರುಗಳು ಯಶೋದಾದೇವಿ ಧರಾದೇವಿ ಅಜಾನಜ ದೇವತೆಯರಿಂದಧಿಕರೂ । ಅದಿತಿದೇವಿಗಿಂತ ಕಶ್ಯಪನುತ್ತಮನು । ಅಜಾನಜರಿಂದ ಪುಷ್ಕರ ಕರ್ಮಪಾಲಕನು ಅಧಿಕನು । ಅವರಿಂದ ಶನೈಶ್ಚರನಧಿಕಾ । ಉಷಾದೇವಿ ದಶಗುಣಧಿಕಳು । ಆಕೆಯಿಂದ ಬುಧನಧಿಕನು । ಬುಧನಿಂದ ಸ್ವಾಹಾದೇವಿ ದಶಗುಣಾಧಿಕಳು । ಸ್ವಾಹಾದೇವಿಯಿಂದ ಕೆಲವು ದೇವತೆಗಳಧಿಕರು । ಅವರಿಂದ ಅನಿರುದ್ಧನ ಸ್ತ್ರೀ ಉಷಾ ಗಂಗಾ । ಶ್ಯಾಮಲಾ ಸಂಜ್ಞಾದೇವಿ ರೋಹಿಣಿ ಪರ್ಜನ್ಯ ಇವರು ದ್ವಿಗುಣಾಧಿಕರು । ಗುರುಪುರಂದರವಿಠಲ ನೇಮಿಸಿದಾ ॥ ೨ ॥

**ಆದಿತಾಳ** ॥ ಇವರಿಂದ ಕರ್ಮಜದೇವತೆಗಳಧಿಕರು । ಅವರಿಂದ ಕಾರ್ತವೀರ್ಯ ಶಶಬಿಂದು ಮಾಂಧಾತಾ । ಭರತ ಪ್ರಿಯವ್ರತ ಪರೀಕ್ಷಿತ ಮೊದಲಾದ ಶತಪುಣ್ಯಶ್ಲೋಕರು । ಬಲಿಚಕ್ರವರ್ತಿ ಮೊದಲಾದ ಸಪ್ತ ಇಂದ್ರರು । ಮುನಿಗಳು ಹನ್ನೊಂದು ಉಚಥ್ಯ ಚ್ಯವನ ಋಷಿಯು ಗಂಧರ್ವರು

ಯೆಂಟು ಪಿತೃಗಳು । ಸಪ್ತ ಪ್ರಹಲ್ಲಾದ ಪಾವಕನೂ । ಇವರು ಕರ್ಮಜ ದೇವತೆ ಸಮರೂ । ಅಜಾನಜ ದೇವತೆಯರಿಂದ ದಶಗುಣಾಧಿಕರ ಮಾಡಿದ ಗುರುಪುರಂದರವಿಠಲರೇಯಾ ॥ ೩ ॥

**ರೂಪಕತಾಳ** ॥ ರುದ್ರರೇಕಾದಶವಸುಗಳೆಂಟು ದ್ವಾದಶಾದಿತ್ಯ ಮರುದ್ಗಣರು । ಋಭು ಗುಣತ್ರಯ ಒಂದು ಋಭು ಒಬ್ಬ ವಿಶ್ವೇದೇವಾ । ಅಶ್ವಿನಿದೇವರಿಬ್ಬರು ಪೃಥ್ವಿ ಪುತ್ರರು । ಮುವ್ವರು ಶತಸ್ಥರೊಳು ಇಂದ್ರ ವಿಶ್ವಾಮಿತ್ರ ವರುಣ ರುದ್ರರೊಳು ಸದಾಶಿವನೂ । ವಸುಗಳೊಳು ಅಗ್ನಿಯೊಬ್ಬ ಮರುತ । ಅಹಂಕಾರಿಕ ಪ್ರಾಣ ಪ್ರವಹ ಮೂವರು । ನವ ದೇವತೋತ್ತಮರು ನವಕೋಟಿ ದೇವತೆಗಳು । ಮರುತಗಳೊಳು ಪ್ರಾಣಾಪಾನ ವ್ಯಾನೋದಾನ ಸಮಾನ ವಾಯು ಸ್ವಲ್ಪಧಿಕ । ಗುರುಪುರಂದರವಿಠಲನ ಪರಮ ಪ್ರಿಯರು ॥ ೪ ॥

**ಝಂಪೆತಾಳ** ॥ ಇವರಿಂದ ವಿಷ್ವಕ್ಸೇನ ಧನಪ ಗಣೇಶಾಧಿಕರು । ಅವರಿಂದ ತಾರಾದೇವಿ ಮಿತ್ರ ನಿಋತಿ ಯಮ ಪರ್ಜನ್ಯಕ್ಕಿಂತ ಯೆರಡು ಗುಣಾಧಿಕರು । ಅವರಿಂದ ಮರೀಚಿ ಅತ್ರಿ ಅಂಗೀರಸ ಪುಲಸ್ತ್ಯ ಪುಲಹಾ ಕ್ರತು ವಸಿಷ್ಠ । ವಿಶ್ವಾಮಿತ್ರ ವೈವಸ್ವತ ಒಂಭತ್ತು ಅಧಿಕರು । ಇವರಿಂದ ಅಗ್ನಿ ಭೃಗು ಪ್ರಸೂತ್ಯುತ್ತಮ ಮಿತ್ರಗಳು । ನೋಡಲು ಯೆರಡು ಗುಣಾಧಿಕರು । ಇವರಿಂದ ನಾರದ ಉತ್ತಮ ವರುಣೋತ್ತಮ ಅಗ್ನಿ ದಶೇಂದ್ರ ವರುಣನೋಪಾದಿ । ಅಧಿಕರು ಗುರಪುರಂದರವಿಠಲನ ಭಕ್ತರು ॥ ೫ ॥

**ತ್ರಿಪುಟತಾಳ** ॥ ಯಮ ಚಂದ್ರ ಸೂರ್ಯ ಶತ ಉಷಾದೇವಿ । ಕ್ರಮದಿಂ ಅರ್ಧಾನ್ಯಾರ್ಧ ಗುಣಾಧಿಕರು । ಅವರಿಂದ ಸನಕಾದಿಗಳು ಉತ್ತಮರು । ಅವರಿಂದ ಪ್ರವಹ ಉತ್ತಮ । ಚಂದ್ರನಿಂದ ದ್ವಿಗುಣಾಧಿಕನೂ ॥ ಪ್ರವಹನಿಂದ ಸ್ವಾಯಂಭು ದಕ್ಷ ಗುರು ಶಚಿ ರತಿ ಅನಿರುದ್ಧರು । ಇವರು ಆರುಮಂದಿ ಪಂಚಗುಣಾಧಿಕರೂ । ಅವರಿಂದ ಅಹಂಕಾರಿಕ ಪ್ರಾಣ ದಶ ಗುಣಾಧಿಕ । ನೃಪರಿಂದ ಕಾಮೇಂದ್ರರು ಹತ್ತು ಗುಣಾಧಿಕರೂ । ಇವರಿಂದ ಸೌಪರ್ಣಿ ವಾರುಣಿ ಪಾರ್ವತಿಯರು ದಶಗುಣಾಧಿಕರು । ನೀಲಾ ಮಿತ್ರವಿಂದೆ ಕಾಳಿಂದಿ ಲಕ್ಷಣೆ ಜಾಂಬವತಿ ದ್ವಿಗುಣಾಧಿಕರೂ ॥ ನೀಲಾದಿಗಳಿಂದ

ಜಾಂಬವತಿ ಅಧಿಕಳು । ಉಮೆಯಿಂದ ಗರುಡ ಶೇಷ ರುದ್ರರು ಹತ್ತು ಗುಣಾಧಿಕರೂ । ಅವರಿಂದ ವಾಣಿ ಭಾರತಿ ಶತಗುಣಾಧಿಕರು । ಅವರಿಂದ ಬ್ರಹ್ಮ ವಾಯು ಶತಗುಣಾಧಿಕರು । ಶಿರಿ ಕೋಟಿ ಗುಣಾಧಿಕಳು । ಶಿರಿಯಿಂದ ಅನಂತಾನಂತ ಗುಣಗಳೊಳಿಂದಾ । ಗುರುಪುರಂದರವಿಠಲ ಉತ್ತಮೋತ್ತಮನೂ ॥ ೬ ॥

ಅಟತಾಳ ॥ ತ್ರಿವಿಧಜೀವರ ಸ್ಥಿತಿಯು ಸಾತ್ವಿಕ ರಾಜಸ ತಾಮಸ। ಒಂದೊಂದು ಮೂರುವಿಧವಾದಾ । ತಾಮಸದ ಸಾತ್ವಿಕರು ಮನುಷ್ಯಾಧಮರು । ತಾಮಸದ ರಾಜಸರು ದೈತ್ಯರ ಭೃತ್ಯರು । ತಾಮಸದ ತಾಮಸರು ದೈತ್ಯರೊಳು ಶ್ರೇಷ್ಠರು । ತ್ರಿವಿಧ ರಾಜಸರು ರಾಜಸ ತಾಮಸ ಅಷ್ಟಜನರು । ರಾಜಸ ರಾಜಸರೂ ಮೂರುವಿಧರು । ರಾಜಸ ರಾಜಸ ಸಾತ್ವಿಕ ಮನುಷ್ಯರು । ರಾಜಸ ರಾಜಸರಲ್ಲಿ ಬ್ರಾಹ್ಮರೂ । ಮತ್ತು ರಾಜಸ ರಾಜಸ ರಾಜಸ ಕ್ಷತ್ರಿಯರು । ರಾಜಸ ರಾಜಸ ವೈಶ್ಯರೂ । ರಾಜಸ ರಾಜಸ ತಾಮಸರು ಚತುರ್ಥರು । ಸಾತ್ವಿಕಪರ ಸ್ವಲ್ಪ ಹಂಸರು । ಸಾತ್ವಿಕಭಾಗ ಯತ್ಕಿಂಚಿದಧಿಕರಾಗಿ । ಹಂಸಾಧಿಕ ರಾಜಸ ಹಂಸರು । ರಾಜಸ ರಾಜಸ ಅಧಿಕ ಸಾತ್ವಿಕ ಭಾಗಾ ಯತ್ಕಿಂಚಿತ್ತಧಿಕರೂ । ರಾಜಸ ರಾಜಸ ಸಾತ್ವಿಕ ಪರಮಹಂಸರೂ। ಸಾತ್ವಿಕಭಾಗ ಯತ್ಕಿಂಚಿದಧಿಕರಾಗಿ ಹಂಸರಧಿಕ ರಾಜಸಹಂಸರೂ । ರಾಜಸ ರಾಜಸ ರಾಜಸ ಅಧಿಕರಲ್ಲಿ ಭಾಗಯತ್ಕಿಂಚಿತ್ತು ಅಧಿಕರು । ರಾಜಸಾಧಿಕರಲ್ಲಿ ರಾಜಸಾಧಿಕಯುಕ್ತವಾದವರೂ । ವಾನಪ್ರಸ್ಥಾಧಿಕರೆಲ್ಲ । ರಾಜಸಾಧಿಕರಾದ ಬ್ರಹ್ಮಚಾರಿಗಳೂ । ಬ್ರಹ್ಮಚಾರಿಯಧಿಕ ರಾಜಸ ಗೃಹಸ್ಥರೂ । ಸಾತ್ವಿಕ ತ್ರಿವಿಧವಾದಾ ಸಾತ್ವಿಕ ತಾಮಸ ಪಿತೃ । ಪಿತೃ ಗಂಧರ್ವರು ಚಕ್ರವರ್ತಿಗಳು । ಸಾತ್ವಿಕ ರಾಜಸರು ಅಧಿಕರಾದ ದೇವತೆಗಳು । ಸಾತ್ವಿಕ ಸಾತ್ವಿಕ ರಾಜಸ ಶಚಿರತಿಪತಿ ಇಂದ್ರ ಕಾಮರೂ । ಸಾತ್ವಿಕ ಸಾತ್ವಿಕ ಸಾತ್ವಿಕ ಸಾತ್ವಿಕ ಬ್ರಹ್ಮವಂದ್ಯಾ ಗುರುಪುರಂದರವಿಠಲಾ ॥ ೭ ॥

ಏಕತಾಳ ॥ ಜಯಾ ವಿಜಯ ಸೂರ್ಯ ಸಂಜ್ಞಾ ಪ್ರಾಣಜ್ಯೋತಿ ನಾಮ । ಭಾರತಿರಾಜ್ಞೆಯಿಂದ ಪೂರ್ವದ್ವಾರದಿ ಮನುಷ್ಯೋತ್ತಮರು । ಶಾಂತಿ ಅನಿರುದ್ಧನ ಸೇವಿಸರು । ನಂದ ಸುನಂದನ ಶ್ರೋತ್ರಾಭಿಮಾನಿ

ಚಂದ್ರರೋಹಿಣಿ । ಅಪಾನದಿ ದ್ಯುನಾಮ ಭಾರತಿ ಆಜ್ಞೆಯಿಂದ । ದಕ್ಷಿಣ ದ್ವಾರದಿಂದಲಿ ಕರ್ಮಜದೇವತೆ । ಪಿತೃ ಸರ್ವರು ಕೃತಿ ಪ್ರದ್ಯುಮ್ನನ ಪಾದಾ ಸೇವೆಯ ಮಾಡುವರು । ಕುಮುದ ಕುಮುದಾಕರ ಅಗ್ನಿ ಸ್ವಾಹಾದೇವಿಯರ । ವ್ಯಾನವಾಯು ಪೃಥ್ವಿ ಶ್ರದ್ಧೆ ಭಾರತಿದೇವಿಯರ ಆಜ್ಞಾಧಾರಕರಾಗಿ । ಗಂಧರ್ವ ತುಂಬುರ ಕಿನ್ನರ ಕಿಂಪುರುಷರು । ಪಶ್ಚಿಮದ್ವಾರದಿ ಬಂದು ಜಯದೇವಿ ಸಂಕರ್ಷಣನ ಧ್ಯಾನಿಪರು । ಬಲ ಪ್ರಬಲ ಇಂದ್ರ ಶಚಿ ಸಮಾನ ವಿದ್ಯಾನಾಮ । ಭಾರತಿ ಅನುಜ್ಞೆಯಲಿ ಶತಕೋಟಿ ಋಷಿಗಳು । ಉತ್ತರ ಬಾಗಿಲಲ್ಲಿ ಬಂದು ಮಾಯಾ ವಾಸುದೇವನನರ್ಚಿಪರು । ಗಂಗಾ ಸಹ ವರುಣ ಉದಾನ ಆಕಾಶನಾಮ ಭಾರತಿ ಅಪ್ಪಣೆಯಿಂದ । ಊರ್ಧ್ವದ್ವಾರದಿ ಬಂದು ಸರ್ವದೇವತೆಗಳು । ಲಕ್ಷ್ಮಿನಾರಾಯಣ ಗುರುಪುರಂದರವಿಠಲನ ಉಪಾಸ್ತಿಯನು ಮಾಡುವರೋ ॥ ೮ ॥

ಜತೆ ॥ ಮುಕ್ತಾಮುಕ್ತರಿಂದ ಸೇವಿಪ ಚರಣ । ಶ್ರೀಧಾಮದಲಿ ವಾಸವಾದ ಗುರುಪುರಂದರವಿಠಲ ॥ ೯ ॥ ಪ್ರೀ ॥

॥ ಶ್ರೀಮದ್ಧ್ವೇಶಾರ್ಪಣಮಸ್ತು ॥



## ೩೦. ಅಣುಮಹತ್ತು ಸುಳಾದಿ.



ರಾಗ ಕಾಂಬೋಧಿ.

**ಧ್ರುವತಾಳ** ॥ ಅಣುವಾಗಬಲ್ಲ ಮಹತ್ತಾಗಬಲ್ಲ । ಅಣುಮಹತ್ತೆರಡೊಂದಾಗಬಲ್ಲ । ರೂಪಾಗಬಲ್ಲ ಅರೂಪನಾಗಬಲ್ಲ । ರೂಪಾರೂಪೆರಡೊಂದಾಗಬಲ್ಲ । ಸಗುಣನಾಗಬಲ್ಲ ನಿರ್ಗುಣನಾಗಬಲ್ಲ । ಸಗುಣ ನಿರ್ಗುಣ ಯೆರಡೊಂದಾಗಬಲ್ಲ । ವ್ಯಕ್ತನಾಗಬಲ್ಲ ಅವ್ಯಕ್ತನಾಗಬಲ್ಲ । ವ್ಯಕ್ತಾವ್ಯಕ್ತ ಯೆರಡೊಂದಾಗಬಲ್ಲ । ಪ್ರಮಾಣನಾಗಬಲ್ಲ ಅಪ್ರಮಾಣನಾಗಬಲ್ಲ । ಪ್ರಮಾಣ ಅಪ್ರಮಾಣ ಯೆರಡೊಂದಾಗಬಲ್ಲ । ಅಘಟಿತ ಘಟಿತ ಅಚಿಂತ್ಯಾದ್ಭುತ । ಶಕುತಿಸ್ವರೂಪ ನಮ್ಮ ಪುರಂದರವಿಠಲಾ ॥ ೧ ॥

**ಮಟ್ಟೆತಾಳ** ॥ ಕಣ್ಣಿಲಿ ಕೇಳುವ ಶಾವನರಿವಾ ಆಸ್ವಾದಿಸುವ ಆಘ್ರಾಣಿಸುವ । ಕಿವಿಯಲಿ ಕೇಳುವ ಶಾವನರಿವ ಆಸ್ವಾದಿಸುವ ಆಘ್ರಾಣಿಸುವ । ಸ್ವರೂಪದಿ ಕೇಳುವ ಆಘ್ರಾಣಿಸುವ । ಲೋಕವಿಚಕ್ಷಣ ದಿವ್ಯಕರ್ಮ ಲೋಕಾಧಿಕಾಶ್ಚರ್ಯ ಪುರಂದರವಿಠಲಾ ॥ ೨ ॥

**ಆದಿತಾಳ** ॥ ಆವಾವ ಕಾಲದಲಿ ವಿಷ್ಣು ವ್ಯಾಪಕನಾಗಿ । ವಿಷ್ಣುಯಿದ್ದಲ್ಲಿ ವಿಷ್ಣುಲೋಕಕಾಗಿಪ್ಪುದಾಗೀ । ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯ । ಸಾರಿಷ್ಟಿವೆಂಬದಿವು ವಿಷ್ಣುಯಿದ್ದಲ್ಲಿ ಉಂಟು । ಪುರಂದರವಿಠಲ ಭಾರಿ ತಾ ಬೊಮ್ಮವಾಗಿ । ಭೂರಿ ಪಂಚವಿಧ ಮುಕುತಿಸಂಪದವಾ ॥ ೩ ॥

**ಅಟತಾಳ** ॥ ವೋದ ದಕ್ಷಿಣಪಕ್ಷ ಪ್ರವೋದ ಉತ್ತರಪಕ್ಷ । ಆನಂದ ಆನಂದುತ್ತುಮ್ಮ ಆಪಾದ ತನಕಾ ಆನಂದ ಆನಂದುತ್ತುಮ್ಮಾ । ಅಪ್ರಾಕೃತವಿಗ್ರಹ ನಮ್ಮ ಪುರಂದರವಿಠಲ ॥ ೪ ॥

**ಏಕತಾಳ** ॥ ಶ್ರೀನಾರಾಯಣ ಪರಬೊಮ್ಮ ವೆಸ್ವೇದ ತನೂರುಹದ : ಯಶೋ ಗಡಾ ನಿಲ್ಲ ಭಾಗ್ಯ ಶ್ರೀಕೃಷ್ಣ ತನೂರುಹ ಗಡಾ । ನೀ ಬಲ್ಲೆ ಭಾಗ್ಯವೊ ಯೇನು ಭಾಗ್ಯವೊ ಏನು ಘನತೆಯೋ । ನೀನೆ ಬಲ್ಲೆ ಶಿರಿಪುರಂದರವಿಠಲ ॥ ೫ ॥

**ಜತೆ** ॥ ಭಕ್ತಿಂ ದೇಹಿ ವಿರಕ್ತಿಂ ದೇಹಿ । ಜ್ಞಾನಂ ದೇಹಿ ಪುರಂದರವಿಠಲಾ ॥ ೬ ॥ ಶ್ರೀಃ ॥

## ೩೧. ಆಳುಆಳ್ದನ ಸುಳಾದಿ.

ರಾಗ ನಾಟಿ.

**ರೂಪಕತಾಳ** ॥ ಆಳುಗಳ ಪರಿಯ ಆಳಿದನೆ ಬಲ್ಲ । ಆಳಿದನ ಪರಿಯ ಆಳುಗಳೆ ಬಲ್ಲರು । ಆಳುಗಳ ಪರಿಯು ಆಳಿದನ ಪರಿಯು ಆರೇನನೆಂದರು ಯೇನು ಮಾಡ್ಯಾರಯ್ಯ । ಆರು ಕೊಂಡ್ಯೆಮಗೆ ಯೇನು ಕಾರಣ

ವಯ್ಯ । ಆರು ಮುನಿದೆಮ್ಮನು ಯೇನು ಮಾಡ್ವಾರಯ್ಯ । ಶಿರಿಪುರಂದರ ವಿಠಲಗೆ ನಮಗೆ ಇಂದು ಬಂತೆ ಸ್ವಾಮಿ ಭೃತ್ಯಸಂಬಂಧಾ ॥ ೧ ॥

**ಮಟ್ಟೆತಾಳ** ॥ ಮಧುರೆಯೊಳಗೆ ನಿನ್ನ ತುಂಟಾಟಕೆಗಳ ನೋಡಾ । ಉದ್ಧವನೆತ್ತಾ ಕುಬುಜೆಯ ಮನೆಯೆತ್ತ ಆ ಆ ಆ ಆ ಆ । ಉದ್ಧವನೆತ್ತ ಕುಬುಜೆಯ ಮನೆಯೆತ್ತ । ನೀ ಮಾಡಿದ ಮರಿಯಾದೆ ಪುರಂದರವಿಠಲ ಉದ್ಧವನೆತ್ತಾ ॥ ೨ ॥

**ಧ್ರುವತಾಳ** ॥ ಉಳ್ಳವರುಂಡಾರು ಮರೆಯ ಮರೆಯ । ಬಲ್ಲಿರ್ದ ನಾಳುಗಳು ತಲೆಯಲಿ ಸುಡಿದರೆಂಬೆನೆ । ಬಲ್ಲಿರ್ದನಾಳುಗಳು ದಟೆಯಲ್ಲಿ ನಡದರೆಂಬೆನೆ । ಬಲ್ಲಿರ್ದ ಪುರಂದರವಿಠಲನಾಳುಗಳು ॥ ೩ ॥

**ಅಟತಾಳ** ॥ ಬೆಟ್ಟ ತಂದಾ ದೈವವು ಹೊದ್ದಿದ್ದ ಕಟ್ಟಾ । ಸಮುದ್ರದ ನಂಟನಾಗಿ ಉಪ್ಪಿನ ಬರಕಂಡ । ಅರಸಿನ ಮಗ ತಿರುತಿನುತಿಹದ ಕಂಡ । ನಿನ್ನ ತೊಂಡನು ನಿನ ತೊಂಡನು ನಿನ್ನ ತೊಂಡನಾಳುವೆ । ನೀನಾಳುವೆ ನಿನ್ನ ತೊಂಡಾನು । ಬರಿಯ ಮಾತಲ್ಲ ವಿಠಲ ನಿನ್ನಾಣೆ । ನಿನ ತೊಂಡಾನು ಪುರಂದರವಿಠಲ ನಿನ್ನ ತೊಂಡನೂ ॥ ೪ ॥

**ಜತೆ** ॥ ನಿತ್ಯಾನಿತ್ಯ ಸುವಸ್ತುಗಳೊಳಗೆ । ನಿತ್ಯಸುನಿತ್ಯ ಪುರಂದರ ವಿಠಲ ॥ ೫ ॥ ಶ್ರೀಃ ॥

## ೩೨. ಸುಳಾದಿ.

**ಧ್ರುವತಾಳ** ॥ ಕಿನ್ನರ ಕಿಂಪುರುಷರು ನಭವಲಿ ಸುರಕನ್ನೆಯರೊಡನಾಡಿ ಪಾಡುತಿರೆ । ನಿನ್ನಾಳಾಗಿ ಗೋಪರು ಕೊಂಬು ಕೊಳಲೂದಿ । ಕಿನ್ನರಿ ವಾರಿಂ ತುತ್ತುರಿ ಧ್ವನಿಗೈಯೆ । ರನ್ನದ ರತುನದಂದುಗೆ ಗೆಜ್ಜೆ ಘಲಘಲಿ । ನಿನ್ನ ಮೂರುತಿ ನಿನ್ನ ಬಾಲಲೀಲೆ । ಚೆನ್ನ ಮೂರುತಿ ಚೆನ್ನ ಕೀರುತಿ ಜಯ ಜಯ । ಯೆನ್ನಾಳಿದ ಪುರಂದರವಿಠಲ ಜೀಯ ॥ ೧ ॥

**ಮಟ್ಟೆತಾಳ** ॥ ಕೌಸ್ತುಭವಿಪ್ಪ ಕೊರಳಲಿ ಕಲ್ಲಿಯ ಕಂಬಳಿಯನಿಡುವೆ । ಕಂಜನಾಭಿಯಲ್ಲಿ ಕಲ್ಲಿಯು ಕಟ್ಟಿ ಮೆರವೆ । ಕಂಜನಾಭಿಯಲ್ಲಿ ಕಲ್ಲಿಯು ಕಟ್ಟಿ ಮೆರವೆ । ಕಂಜನಾಭಿಯಲಿ ಕಮಲೆಯು ನೂಪುರಗತಿಕ್ರಮ ಗತಿಗಳನೊಪ್ಪುವೆ । ಕಂಜನಾಭಿಯಲಿ ಬಾಲಲೀಲೆಯು ನಿನಗೆನ ಪಿರಿಯವೋ ಪುರಂದರವಿಠಲಾ ॥ ೨ ॥

**ಆದಿತಾಳ** ॥ ನಿಲಮುತ್ತಿನ ದಂಡೆ ನಿಲಿಗುಂಜಿಯ ದಂಡೆ। ಮೇಲು ಮಂದಾರ ತುಲಸಿಯ ಪೂವಿನ ದಂಡೆ । ಬಾಲಕರೊಡನಾಡುವ ದಂಡೆ । ಮೇಲು ಮೇಲುದಿಬಪ್ಪ ಖಳರ ಮುಖವಾ ದಂಡೆ। ಭಾಳಲೋಚನ ಪುರಂದರವಿಠಲರೇಯ । ಮೌಳಿಕಂದರ ಬಾಲಶಿಬಿರಲೊಪ್ಪಿರು । ಸ್ವತೋಮಹೀಯಾನ್ ಗುಣಭರಿತ ಪುರಂದರವಿಠಲರೇಯ ಅಣೋರಣೀಯಾನ್ ॥ ೩ ॥

**ರೂಪಕತಾಳ** ॥ ನಿನ್ನವನೆಂಬೆ ನೀ ಕೈವಿಡಿಯದೆ । ತನ್ನಯ ತನ್ನ ಸಾಧನ ಸಾಧಿಸದೆ । ನಿನ್ನಾಳುತನ ಶಿರಿಪುರಂದರವಿಠಲರೇಯ ನಿನ್ನಾಳುತನಾ ॥ ೪ ॥

**ತ್ರಿಪುಟೆತಾಳ** ॥ ಶ್ರುತಿಯಾ ತತಿಯಾ ಗತಿಯಾ ಗರುವನ ನೆಲೆಯಾ। ಕಂಡ ಕರ್ಮಠರುಗಳು ಬಲ್ಲರೆ ಜಗತ್ಪತಿಯಾ ನೆಲೆಯಾ। ಯತಿಯಾ ತತಿಯಾ ಪುರಂದರವಿಠಲರೇಯನ ಕಂಡ ಕರ್ಮಠರುಗಳು ॥ ೫ ॥

**ಝಂಪೆತಾಳ** ॥ ಶ್ರುತಿ ಉಪನಿಷತ್ತುಗಳಲ್ಲಿ ಶ್ರುತಿಪುರಾಣ ಆಗಮಗಳಲ್ಲಿ । ರತಿಪತಿಪಿತ ನಾರಾಯಣ ಚತುರಮುಖ ಪಂಚಮುಖ ಮುಖ್ಯದೇವತೆಯರಿಗೆ। ಗತಿ ಪುರಂದರವಿಠಲರೇಯಾ ॥ ೬ ॥

**ಅಟೆತಾಳ** ॥ ವೇದಗಳೆಂಬ ದಾವಣೆಯಲ್ಲಿ ನಾಮಗಳೆಂಬ ಮೂಗುನೇಣುಗಳಿಂದ । ಜೀವರುಗಳೆಂಬ ಯೆತ್ತುಗಳನೆ ಕಟ್ಟಿ ಕರ್ಮವೆಂಬ ಹೇರ ಹೇರಿಸಿ ಆಡುವನು । ಪುರಂದರವಿಠಲರೇಯನೆಂಬ ಒಬ್ಬನೆ ದೊಡ್ಡ ವ್ಯವಹಾರಿ ಕಾಣಿರೋ ॥ ೭ ॥

**ಏಕತಾಳ** ॥ ಸಚರಾಚರವಾ ಪ್ರೇರಿಸುವಾರ್ಯ್ಯಾರಯ್ಯ । ಜಗದೆಂತ್ರವಾಹಕರ್‍ಯ್ಯಾರಯ್ಯ । ಪುರಂದರವಿಠಲರಾಯನಲ್ಲದೆ ಸ್ವತಂತ್ರರ್‍ಯ್ಯಾರಯ್ಯ ॥ ೮ ॥

**ಜತೆ** ॥ ನಿನ್ನನೆ ನಂಬಿದೆ ಮನ್ನಿಸಯ್ಯ । ಪುರಂದರವಿಠಲರೇಯ ನಿನ್ನನೆ ನಂಬಿದೆ ॥ ೯ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥



## ೩೩. ಸುಳಾದಿ.

ರಾಗ ರೇಗುಪ್ತಿ.

**ಧ್ರುವತಾಳ** ॥ ಗಜಮುಖನಯ್ಯನಯ್ಯನಯ್ಯ । ಸೀನಾ ವ್ರಜದ ಗೋವಳರೊಡನಾಟವಾಡಿ ನಲಿದೆ । ತ್ರಿಜಗವಂದಿತ ಜಾತ ಪೂತ ಶ್ರೀ ನಾಥ ಮುಕುತಿದಾಯಕ । ಭವಾದಿ ಭವದೂರ ಅಕುತೋಭಯ ಭಾನು ಕೋಟಿತೇಜ । ಭಕತರಿಗೀವ ಕಾವ ದೇವ ನಮೋ ನಮೋ । ಅಭಿನವ ಪುರಂದರವಿಠಲನ ವಿಮಲಚರಿತ ವಿನೋದಿಯಯ್ಯಾ ॥ ೧ ॥

**ಮಟ್ಟೆತಾಳ** ॥ ದುರುಳೆ ಪೂತನಿ ಶಕಟಾಸುರ ವತ್ಸಮುಖ್ಯರನೂ । ವಧಿಸಿದೆಯಲೊ ಬಾಲ್ಯ ಮೊದಲಾಗಿ । ನರಗೆ ಸಾರಥಿಯಾಗಿ ವಾಘೆ ಚವ್ರ ಟಿಕೆವಿಡಿದು । ಕುರುಕುಲ ನಿರ್ಮೂಲಸಿ ಭೂಭಾರವಿಳುಹಿದೆಯಲಾ । ಪರಮ ಭಾಗವತರನ್ನೂ ಸಲಹಲೆಂದು । ಧರೆಯಮೇಲವತರಿಸಿದೆ ಅಭಿನವ ಪುರಂ ದರವಿಠಲಾ ॥ ೨ ॥

**ರೂಪಕತಾಳ** ॥ ಕಮಲಜನು ನಿನ್ನ ಪದಕಮಲವನೂ ತೊಳದ ನೆನೆ । ಉಮಾಪತಿಯು ನಿನ್ನ ಪದಜಲವ ಪೊತ್ತನೆನೆ । ಯಮಜ ಮಾಡಿದ ರಾಜಸೂಯ ಮಖದಿ । ಮಮಕರಿಸಿದೆಂತು ನೀ ಕಾಲುತೊಳದೂಳಿಗವ । ಮಮ ಪ್ರಾಣಾ ಹಿ ಪಾಂಡವರೆಂಬ ಬಿರಿದಿಗೆ । ನಮೊ ನಮೊ ಯೆಂಬೆ ಅಭಿ ನವ ಪುರಂದರವಿಠಲ ॥ ೩ ॥

**ಝುಂಪೆತಾಳ** ॥ ವಾರಣಪುರಿಯೆತ್ತ ದ್ವಾರಾವತಿಯೆತ್ತ । ನಾರಿ ಸಭೆಯಲಿ ಮೊರೆಯಿಡಲು ಕೇಳಿ ಶೀರೆಗಳನೊದಗಿಪ್ಪುದೆತ್ತ । ವಾರಣದ ನಿಡುಸ್ವರವೆತ್ತ ಭೂರಿ ಧಾಮವೆತ್ತ । ತಾರಿಕ್ಷ್ಯರೂಢನಾಗಿ ವಾರಿಚರರನು

ಕಡಿವುದೆತ್ತ । ನಾರಿಕುಂಜರವನು ಹೊರವ ಉದಾರತನ ನಿನಗಲ್ಲದೆ ಮ । ತ್ತಾರಿಗುಂಟು ಅಭಿನವ ಪುರಂದರವಿಠಲಾ ಭಕ್ತವತ್ಸಲಾ ॥ ೪ ॥

**ತ್ರಿಪುಟತಾಳ** ॥ ತಂದೆ ರಾಣಿಗಾಗಿ ತ್ಯಜಿಸಿದಾ ಆ । ಕಂದನನಂದು ಸಲಹಿದೆಲಾ । ಬಂಧುಗಳಿಂದ ವರ್ಜಿಸಿಕೊಂಡ ಮುನಿ । ನಂದನನಾನಂದ ವಿತ್ತಿಯುಲಾ । ಇಂದು ಯೆಮ್ಮ ಪೊರೆ ಅಭಿನವ ಪು । ರಂದರವಿಠಲಾ ದೀನನಾಥಾ ॥ ೫ ॥ ಶ್ರೀಃ ॥

**ಅಟತಾಳ** ॥ ಸದಮಲಚರಿತ್ರ ವಿಚಿತ್ರಮಹಿಮ । ಮಧುಕೈಟಭಹರ ಕಂಸಾಸುರ ಸಂಹಾರ । ಸುದರುಶನಧರಾ ವಿಧಿಭವಸುರಪತಿಮಕುಟರಂಜಿತ । ಸದಾ ನಮೋ ನಮೋ ಅಭಿನವ ಪುರಂದರವಿಠಲಾ ॥ ೬ ॥

**ಏಕತಾಳ** ॥ ಇಂದಿರಾದೇವಿ ತನ್ನಂಗುಟದುಗುರ ಕೊನೆಯ । ಂದವನು ಪೊಗಳಲರಿಯಳೆಂದದೆ । ಕಂದರ್ಪಕೋಟಿಲಾವಣ್ಯವೆಂದು ಪಡಿವನೆ । ಇಂದುರವಿಕೋಟಿ ಕಾಂತನಿಂದು ಮೊದಲಾಗೆ ನಿನ್ನ । ಸುಂದರೋದ್ಧಾರಾ ಗೋವಿಂದ ನಿನ್ನ ಪೊಗಳುವರೆ । ಇಂದುಧರ ದ್ರುಹಿಣಾದ್ಯರಳವೆ ದೇವಾ ನಮೋ ನಮೋ ಅಭಿನವ ಪುರಂದರವಿಠಲ ॥ ೭ ॥ ಶ್ರೀಃ ॥

॥ ಶ್ರೀಕೃಷ್ಣಾರ್ಪಣಮಸ್ತು ॥



# ೩೮. ವೀರನಾರಾಯಣ ಸುಳಾದಿ.



## ರಾಗ ಮುಖಾರಿ.

**ಧ್ರುವತಾಳ** ॥ ಹರಿಶರಣರೆನ್ನ ಮನೆಯ ಮೆಟ್ಟಲು ಮನೆ ಪಾವನ್ನವಾಯಿತು । ಹರಿಶರಣರೆನ್ನ ಕೂಡೆ ಮಾತಾಡಲು ತನು ಪಾವನವಾಯಿತು । ಹರಿಶರಣರೆನ್ನ ಮನೆಗೆ ಬಂದರೆ । ಯೆನ್ನ ಇಪ್ಪತ್ತೊಂದು ಕುಲ ಪಾವನ್ನವಾಯಿತು । ಹರಿಶರಣರೆನಗೆ ಗತಿ ಹರಿಶರಣರೆನಗೆ ದೆಶೆ । ಪುರಂದರವಿಠಲ ಗದುಗಿನ ವೀರನಾರಾಯಣ ॥ ೧ ॥

**ಮಟ್ಟೆತಾಳ** ॥ ಭಾರತ ಆಗಮಾಯುಗೋಚರನೆಂದು । ವಿಚಾರಿಸೆ ಮನುಜರಿಗೆ ಗೋಚರನಪ್ಪಂತೆ ವೀರನಾರಾಯಣ । ನೀ ಕವಿಯೆಂದೆನಿಸಿಕೊಂಡೆ ಶಿಕಾರಪುರ ವ್ಯಾಸನೆನಿಸಿದೆ । ಶಕ್ರತನ್ನ ಶಿರಿಪುರಂದರವಿಠಲ ಗದುಗಿನ ವೀರನಾರಾಯಣ ನಿನಗೇನು ಹಿರಿಯುವ್ರೋ ॥ ೨ ॥

**ರೂಪಕತಾಳ** ॥ ಬದರಿಕಾಶ್ರಮದೊಳಿದ್ದು ಬಾದರಾಯಣನೆಂದೆನಿಸಿಕೊಂಬಂತೆ । ಗದುಗೆಂಬ ಪುರದೊಳಿದ್ದು ಗದುಗಿನ ವೀರನಾರಾಯಣಸ್ವಾಮಿ । ತ್ರಿಭುವನೇಶ ಪುರಂದರವಿಠಲ ॥ ೩ ॥

**ಝಂಪೆತಾಳ** ॥ ಯದುಕುಲದಲುದಿಸಿ ಗೋಪಾಲರ ಕೂಡಾಡಿ । ಗದುಗನಾಡಿ ಆಡಿಯಾಡಿದಂದಿಂದಾ । ಸದುಭಕತಪ್ರಿಯ ಪುರಂದರವಿಠಲ । ಗದುಗಿನ ವೀರನಾರಾಯಣಸ್ವಾಮಿ ॥ ೪ ॥

**ತ್ರಿಪುಟತಾಳ** ॥ ತ್ರಿಭುವನವ ಸಂಹರಿಸಿ ನಿನಗೆ ಹೊಟ್ಟೆಕಿಲ್ಲದ ಕಾರಣ । ವಿಭೂತಿಯೊಳಗಣ ಗದುಗಗಾಡೆ ಗದುಗಿನ ವೀರನಾರಾಯಣ ಸ್ವಾಮಿ ಪುರಂದರವಿಠಲ ॥ ೫ ॥

**ಅಟತಾಳ** ॥ ಭಾರತಮಲ್ಲ ಭೀಷ್ಮನೆಂದೆಂಬರು । ಭಾರತಮಲ್ಲ ಅರ್ಜುನನೆಂದೆಂಬರು । ಭಾರತಮಲ್ಲ ಕರ್ಣನೆಂದೆಂಬರು । ಭಾರತಮಲ್ಲ ರವಯರ್ಾರಲ್ಲ । ಭಾರತಮಲ್ಲ ಪುರಂದರವಿಠಲ ಗದುಗಿನ ವೀರನಾರಾಯಣ ಸ್ವಾಮಿ ॥ ೬ ॥

**ಏಕತಾಳ** ॥ ಭೂಭಾರವನಿಳುಹಿ ಅಜಭವ ಇಂದ್ರಾದಿಗಳಿಗೆ ಶೋಭನವನಿತ್ತೆ ಈ ಬುಧಜನರಿಗೆ । ಶ್ರೀಭೂಸುರರಿಗೆ ಶೋಭನವನಿತ್ತೆ ಶ್ರೀಪುರಂದರವಿಠಲ ಗದುಗಿನ ವೀರನಾರಾಯಣ । ನಿನಗೇನು ಹಿರಿಯುವ್ರೋ ಶೋಭನವನಿತ್ತೆ ॥ ೭ ॥

**ಜತೆ** ॥ ಪದುಮನಾಭ ಶಿರಿಪುರಂದರವಿಠಲ । ಗದುಗಿನ ವೀರನಾರಾಯಣ ಸ್ವಾಮಿಯಾ ॥ ೮ ॥ ಶ್ರೀಃ ॥

## ೩೫. ಸುಳಾದಿ.



ರಾಗ ಕಾಂಬೋಧಿ.

**ಧ್ರುವತಾಳ** ॥ ಅಣುಮೂರುತಿಗಳು ನಿತ್ಯವಾಗಿ ಒಂದಾನಂತ ವಾಗಿಯಿಪ್ಪವು ಕಂಡ್ಯಾ । ಮಹಾಮೂರುತಿಗಳು ನಿತ್ಯವಾಗಿ ಒಂದಾನಂತ ವಾಗಿಪ್ಪವು ಕಂಡ್ಯಾ । ಅಣುಮಹತ್ತು ಮೂರುತಿಗಳಿಗೆ ತಮ್ಮೊಳು ಭೇದ ಇನಿತಿಲ್ಲ ಕಂಡ್ಯಾ । ಬೊಮ್ಮ ಶಂಡಾ ಮೂರುತಿಗಳಿಗೆ ತಮ್ಮೊಳು ಭೇದ ಇನಿತರೊಳೊಂದೊಂದರೊಳಡಗಿ । ಅನವರತ ಇಪ್ಪವು ಕಂಡ್ಯಾ । ಅಣು ಮಹಾಮೂರುತಿಗಳಿಗೆ ತಮ್ಮೊಳು ಭೇದ ಇನಿತಿಲ್ಲದ ಬೊಮ್ಮ ಕಂಡ್ಯಾ । ಇಂತಪ್ಪದದುಭೂತವಾಗಿಯಿಪ್ಪಾ ಆ ಅನಂತಾನಂತಮಹಿಮ ಕಂಡ್ಯಾ । ಇಂತಪ್ಪ ಮಹಿಮೆಯೊಳೊಂದನಾದರೆ ಬೊಮ್ಮ ಚಿಂತಿಸುವ ಭಕತರಿಗೆಲ್ಲ । ಸಂತತ ತನ್ನನೆ ತೆತ್ತಿಹ ಸುಲಭತೆ ಯೆಂತುಟೊ ಗುರುಪುರಂದರವಿಠಲ ರೇಯಾ ॥ ೧ ॥

**ಮಟ್ಟೆತಾಳ** ॥ ಸಕಲ ಸುರರು ತಮ್ಮ ಮತಿಯುಳವಿಲಿ ಸಕಲೇಶನ ಪರಿಯನರಿವರು । ಸಕಲವೇದವರ್ಣಿಸುವನೀತ ಚತುರ್ಮುಖ ಹರಿಯ ಸ್ವರೂಪವರಿವರು । ಸಕಲವೇದವರಿಯದವ ಹಲವ ಲಕ್ಷುಮಿ ಹರಿಯ ಸ್ವರೂಪವರಿವಳು । ಲಕ್ಷುಮಿ ಹರಿಯ ಅನಂತಸ್ವರೂಪನಿಕರ ಗುರುಪುರಂ ದರವಿಠಲಗೆ ॥ ೨ ॥

**ರೂಪಕತಾಳ** ॥ ವಾಮನರೂಪನ ಪಾದದಲಿ ಭೂಮಿಯಡಗಿ ದ್ದುದಾ । ಬಲಿಯರಿಯನೆ ಅಮ್ಮ ಉಣ್ಣುತಲಿದ್ದು ಬಾಯೊಳು ಬೊಮ್ಮಾಂಡ ವಿದ್ದುದು ಯಶೋದೆ ಕಾಣಳೆ । ನಮ್ಮ ಗುರುಪುರಂದರವಿಠಲ ಮನ್ನಿಯೊಳಿ ದ್ದುದೆ ಪ್ರಮಾಣವಲ್ಲದೆ ॥ ೩ ॥

**ಅಟೆತಾಳ** ॥ ಹರಿಯಲ್ಲದೆ ಜಗವಿರಲರಿಯದಾಗಿ । ಹರಿಯಲ್ಲದೆ ಚರಿಸಲರಿಯದಾಗಿ । ಹರಿಯೆ ಜಗವೆಂದು ಭ್ರಮಿಸುವರೂ । ಅಲ್ಲಿ ಅಲ್ಲಿ

ವಿರುದ್ಧ ಧರ್ಮವಾ ವಿಚಾರಿಸರೂ । ಪರಾಧೀನವೀಜಗವೆಲ್ಲ । ನಮ್ಮ ಗುರು ಪುರಂದರಾವಿಠಲ ಸ್ವತಂತ್ರ ॥ ೪ ॥

ಏಕತಾಳ ॥ ಅರಿದಿಗರಿದು ಶ್ರೀಹರಿಯ ಮಹಿಮೆಯಿದನರಿವರಾರು ಜಗದೊಳಗಿನ್ನು । ನಮ್ಮ ಗುರುಮಧ್ವಮುನಿಯ ಸೇವಕರ ಅದೆ ಇದನರಿವರಾರು । ಜಗದೊಳಗಿನ್ನು ನಮ್ಮ ಗುರುಪುರಂದರವಿಠಲನ ಮಹಿಮೆಯಿದನರಿವರಾರು ॥ ೫ ॥

ಜತೆ ॥ ಯೆಂತೆಂತು ಎಣಿಸಲು ಬಹುದೆ । ಅನಂತಮಹಿಮ ಗುರು ಪುರಂದರವಿಠಲಾ ॥ ೬ ॥

## ೩೬. ಸುಳಾದಿ.

ಧ್ರುವತಾಳ ॥ ಹರಿಯ ಉಳ್ಳವನೆಂಬೆನೆ ಸುರರಯ್ಯರಯ್ಯ ನೀ । ಸ್ವರೂಪಿಯೆಂಬೆನೆ ವಿಶ್ವರೂಪಧಾರಿ ಹರಿ ನೀ । ಸುಲಭನೆಂಬೆನೆ ನಿನ್ನವರ ವಾಕುಗಳರಿಯವೆಂಬವು । ಭಕತರು ನಿನ್ನನೇನೆಂದು ಅರಿತು ಸ್ತುತಿಪರ್ಯೆ । ಶರಣರು ನಿನ್ನನೇನೆಂದು ಅರಿತು ಭಜಿಪರ್ಯೆ । ಗುರುಪುರಂದರವಿಠಲ ನಿನಗೆ ಧರೆಯಮೇಲುದಿಸದಿದ್ದರೆ ॥ ೧ ॥

ಮಟ್ಟೆತಾಳ ॥ ಹರಿಯೆ ನಿನ್ನ ಚರಣಯುಗಳವಾ ಯೆರಗದಜಾದಿ। ಸುರಗಣಾಭರಣರತ್ನಗಳಲ್ಲಿ ತಮ್ಮ ಸ್ವರೂಪವ ಕಂಡು । ಪರಮ ಆಶ್ಚರ್ಯ ಯುಕುತವಾಗಿರೆ ನಿನ್ನ ಮುಕುತಿಯ ಕಾಂತಿ ಯೆಂತುಟೋ । ಪರಮ ಪುರುಷ ದಿವ್ಯತೇಜನೆ ಗುರುಪುರಂದರವಿಠಲ ॥ ೨ ॥

ರೂಪಕತಾಳ ॥ ಅಪಾರಮಹಿಮ ಲೀಲಾಜಾತಾ ಸುಪರ್ಣವಾಹನ್ನ। ಸುರೇಶ ಸರ್ಪಶಯನ ಸರ್ವೇಶ।ಗುರುಪುರಂದರವಿಠಲ ಜನಾರ್ದನ ॥ ೩ ॥

ಅಟೆತಾಳ ॥ ನಮ್ಮ ಹಿರಿಯರೆನಗೆ ನಿನ್ನ ತೋರಿದರೆ । ಯೆಲೆ ನರಹರಿಯೆ । ನಾನೇಕೆ ವಿಚಾರಿಪೆ ನಿನ್ನ ಹರಿಯೆ । ನಮ್ಮ ಗುರುಪುರಂದರವಿಠಲ ಕರುಣಾಕರ ನರಹರಿಯೆ ॥ ೪ ॥

ಏಕತಾಳ ॥ ನಿನ್ನ ನಾನಾವೇದಗಳಿನ್ನು ಅರಿಯವೆನ್ನಲು । ಎನಗ ಳವೇನೊ ನಿನ್ನ ನಾನರಿಯೆ ಪ್ರ । ಸನ್ನ ನೀ ಸಲಹೆಂದರೆ । ಎನ್ನಳವೇನೊ ಅನುಪಮಮಹಿಮನೆ ಗುರುಪುರಂದರವಿಠಲ ॥ ೫ ॥

ಜತೆ ॥ ಇಂದಿರಾರಮಣ ಜಗದಾ । ಗುರು ಪುರಂದರವಿಠಲ ಇಂದಿ ರಾರಮಣ ॥ ೬ ॥ ಶ್ರೀಃ ॥

## ೩೭. ರಾಮನಾಮ ಸುಳಾದಿ.

ಧ್ರುವತಾಳ ॥ ಅಯ್ಯಯ್ಯಾ ಕೈಕೆ ಮುನಿದರೆ ದೇವಪ್ಪ । ಅನೌಕ ಸರಸಾಳೂದ ನಿನ್ನ ದ್ವೈತತನ ಚಿಂತೆ ಶಕ್ತಿ ಹೋಹುದೆ ಪ್ರಭುವೆ । ಅಯ್ಯ ಮಂಥರೆ ಜರದರೆ ಲೋಕಾ । ಪಂತಿಪರಸಾಳುದ ನಿನ್ನ ತಿಂತಿಣಿಯು ಗೆಲುವ ಶೀಲವಹುದೆ ವಿಭುವೆ ಅಯ್ಯಯ್ಯ । ತಂದೆಯಲ್ಲದಿರೆ ತರುಲತೆಗೆ ಪಶು ಪಕ್ಷಿಗೆ ಚೇತನವೃಂದಕೆ । ಮುಕುತಿಯನಿತ್ತ ಮಹಿಮೆ ಹೋಹುದೆ ಅಯ್ಯ ಯ್ಯ ॥ ಆರು ಮುನಿದರಾರು ಜರದರಾರೊಲದಿದ್ದರಂ ಹೀನವುಂಟೆ । ತಾರಕಾ ಬ್ರಹ್ಮ ದ್ವಿರೂಪನೆ ನಿನಗೆ ಅಯ್ಯಯ್ಯಾ । ಜಾನಕಿವಲ್ಲಭ ಲಕ್ಷ್ಮಣಾ ಗ್ರಜ ಹನುಮನಾಳ್ದಾ । ರಾಮರಾಯ ರಾಯರದೇವ । ಪುರಂದರವಿಠಲ ಅಯ್ಯಯ್ಯಾ ॥ ೧ ॥

ಮಟ್ಟತಾಳ ॥ ತುಂಗವಕ್ಷ ತಪರಿಯ ಮೂರುತಿಯ ರಥಾಂಗಪಾಣಿ । ತಂಗಿತಾರೆ ಪರಮಪೂರುಷ ಹರಿಯ ತರಣಿತೇಜನ । ಅಂಗನೆಯರ ಮನವ ಸೂರೆಗೊಂಬ । ತಂಗಿತಾರೆ ತರಣಿತೇಜನ ತಿಂಗಳೇಕೆ ತಗರಲೇಕೆ ಸಾ । ರಂಗಡಾಮನೊಲದಿರನಿದೇಕೆ ತಂಗಿತಾರೆ ತರಣಿತೇಜನ । ರಂಗೇಶ ಪುರಂದರವಿಠಲನ ಮಂಗಳಾಂಗ ಒಲದೊಲವಿರಲಿದೇಕೆ ತಂಗಿತಾರೆ ತರಣಿ ತೇಜನ ॥ ೨ ॥

ರೂಪಕತಾಳ ॥ ಅರಿದನೊಬ್ಬ ನಾಸಿಕವ ನಿನ್ನನುಜೆಯ । ಪುರವ ಸುರುಪಿ ದಾನವರ ಗೆದ್ದನೊಬ್ಬ । ಶರನಿಧಿಯ ದಾಂಟಿದನೊಬ್ಬ । ಶಿರಿಮುಡಿಯ

ಮುಕುಟವ ಕಿತ್ತಿಟ್ಟನೊಬ್ಬ । ಪುರಂದರವಿಠಲರಾಯನ ತೊಟ್ಟಿ ಬೇಡಾ । ಶರಣುಹೊಕ್ಕು ಬದುಕುವ ಬಾರೆಲೊ ಅಣ್ಣಣ್ಣ ॥ ೩ ॥

**ಅಟತಾಳ** ॥ ರಾಮರಾಮೆನುತಂಬುಧಿಯ ದಾಂಟಿದೆ । ರಾಮ ರಾಮೆನುತಸುರರ ಗೆಲಿದೆ। ಶ್ರೀರಾಮರಾಮೆನುತ ಭೂಮಿಸುತೆ ನಿನ್ನ ಪಾದವ ಕಂಡೂ । ಶ್ರೀರಾಮರಾಮೆನುತ ರಾಮ ಪುರಂದರವಿಠಲನ ಉಂಗುರವಿತ್ತು । ರಾಮನರ್ಧಾಂಗಿ ದೇವಿ ಚಿತ್ರಿಸೋ ಶ್ರೀರಾಮರಾಮೆನುತ ॥ ೪ ॥

**ಏಕತಾಳ** ॥ ರಾಮನೊಳು ಹನುಮನು ಸೇರುವ ಯೆಂದರಿಯಿ ರೋ । ರಾಮನ ಕೈಯಿಂದ ರಾಮಕಟಕವೆಂದರಿಯಿರೋ । ರಾಮನ ಪ್ರಸಾದ ಧರೆಗಳ ಕೆಣಕದಿರಿರೋ । ರಾಮಬಾಣಕಿದಿರಾಗದಿರಿರೋ ದನುಜ ರೆಲ್ಲ । ರಾಮನ ಪ್ರಸಾದ ಧರೆಗಳ ಕೆಣಕಾದಿರಿರೋ । ರಾಮ ನಿಮ್ಮ ರಾವ ಣನ ಶಿರವ ಚೆಂಡಾಡುವನೂ । ರಾಮ ಪುರಂದರವಿಠಲನ ಪೊಂದಿ ಬದು ಕಿರೋ ॥ ೫ ॥

**ಜತೆ** ॥ ಸಹಸ್ರನಾಮ ಸಮ ರಾಮನಾಮ । ಮಹಾಮಹಿಮನು ಪುರಂದರವಿಠಲ ರಾಮರಾಮ ॥ ೬ ॥ ಶ್ರೀಃ ॥

## ೩೮. ಖಳಜನ ಸುಳಾದಿ.

**ಧ್ರುವತಾಳ** ॥ ಖಳರ ನೋಟವೆ ಹಾವಲ್ಲವೆ । ಹಾವಾ ಬೇರಿನ್ನ ರಸಲ್ಯಾತಕೆ । ಖಳರ ನೋಟವೆ ಹುಲಿಯಲ್ಲವೆ । ಹುಲಿಯು ಬೇರಿನ್ನರಸ ಲ್ಯಾತಕೆ॥ ಖಳರ ಕೂಟವೆ ವಿಷವಲ್ಲವೆ। ವಿಷವ ಬೇರಿನ್ನರಸಲ್ಯಾತಕಯ್ಯಾ। ಖಳರೊಳಗೆನ್ನ ಹುಟ್ಟಿಸಿದೆ ಖಳರಿಗೊಪ್ಪಿಸಿಕೊಟ್ಟೆಯಲ್ಲ ॥ ಖಳರ ಖಂಡ ದಂಡೆಯ ಮುರಿವಾನೆ। ಖಳರ ನಿವಾರಣ ಪುರಂದರವಿಠಲ ॥ ೧ ॥

**ಮಟ್ಟಿತಾಳ** ॥ ಖಳರೈಶ್ವರ್ಯ ಖಳರ ವಿಭೂತಿ। ಖಳರಲಿ ದೌತ್ಯ ಖಳರ ವಿದ್ಯೆಗಳು। ಖಳರ ತ್ಯಾಗ ಖಳರ ಕರ್ಮ । ಖಳರ ಕಷ್ಟ ನಿಷ್ಠೂ

ರಂಗಳು । ಪುರಂದರವಿಠಲನ ಪರಮಪ್ರಿಯರ । ಅವಮನ್ನಣೆನೀವೂದಾ ಸರ್ವದಾ ನೋಡಾ ॥ ೨ ॥

**ರೂಪಕತಾಳ** ॥ ಖಳರ ಕಷ್ಟ ನಿಷ್ಠೂರಂಗಳ ತಾಳಿದರೆಲಾ ಮನುಗಳು । ತಾಳಿದರೆಲಾ ಮುನಿಗಳೂ । ತಾಳಿದರೆಲಾ ಸಕಲ ದೇವತೆಗಳು । ತಾಳಿದರೆಲಾ ಪುರಂದರವಿಠಲನೊಲಿವನ್ನಕಾ ॥ ೩ ॥

**ಅಟಿತಾಳ** ॥ ಪಾಷಂಡರ ಕೂಡೆ ಕಾಳಗ । ವಿಷ್ಣುದ್ವೇಷಿಗಳ ಕೂಡೆ ಕಾಳಗ । ಕಾಳಗ ನಾಸ್ತಿಕರ ಕೂಡೆ । ಕಾಳಗ ಹರಿಡಂಬಿಗರ ಕೂಡೆ । ಪುರಂದರವಿಠಲ ಮೆಚ್ಚಿ ಕಾದಿಸಿ ಕಾದಿಸಿ ನಮ್ಮನೆ ಗೆಲಿಸುವ ॥ ೪ ॥

**ಏಕತಾಳ** ॥ ಅಸುರರ ಬದುಕಾ ಬಿಶಿಅರಸಿನವ್ವಾ । ಸುರರ ಬದುಕು ಸುಸ್ಥಿರ ಕಾಣಿರೊ । ಆವಾವ ಜಗಜಗಂಗಳೊಳಗೆ ಸುರರ ಬದುಕು । ಸುರರ ಬದುಕು ಸುಸ್ಥಿರ ಕಾಣಿರೊ । ಪುರಂದರವಿಠಲನ ಕೋಪಪ್ರಸಾದದಿಂದೆ । ಸುರರ ಬದುಕು ಸುಸ್ಥಿರ ಕಾಣಿರೊ ॥ ೫ ॥

**ಜತೆ** ॥ ಖಳಕುಲತಿಮಿರದಿವಾಕರನಾರ್ಥಿಯು । ಖಳಕಮಲೇಂದು ಪುರಂದರವಿಠಲ ॥ ೬ ॥ ಶ್ರೀಃ ॥

---

## ೪೯. ಸುಳಾದಿ.

**ಧ್ರುವತಾಳ** ॥ ನೀನೆ ಕಾರಣನಾಗಿಹಾ ಅಕಾರಣರು ಬ್ರಹ್ಮಾದಿಗಳು । ನೀನೆ ಕರ್ತನು ಅಕರ್ತರು ಸಿರಿಅಜಭವಾದಿಗಳು । ಸ್ವತಂತ್ರ ನೀನು ಅಸ್ವತಂತ್ರರವರು । ಮೂಲಾ ನೀನು ಮಧ್ಯಮರವರು । ನಿತ್ಯ ನೀನು ಲಯವಾಗುವರವರು । ಭೋಕ್ತ ನೀನೆ ಸರ್ವಸಾರಾತ್ಮಕನಾಗಿಹಾ ಸ್ವೀಕರಿಪುವಿ ಕರ್ಮ ನಿನ್ನಾಧೀನಾ । ಅನಾದಿಕಾಲದ ಇರವನು ನೋಡಿ ಆವ ಜೀವರಿಗೆ ಸುಖಗಳನೀವೆ । ದುಃಖಗಳನೀವೆ । ಜೀವರಿಗೆ ದುಃಸಮ್ಮೋಹವ ತಂದು ಕವಿಸುವಿ । ಅನಾದಿಕರ್ಮ ಅನಾದಿಸಾಧನಂಗಳು । ಸ್ವಸ್ವರೂಪ ತಿಳಿದು ಮಾಡಿಸಿ ಪರಿಪರಿ ಫಲಂಗಳನೀವೆ ಪುರಂದರವಿಠಲಾ ॥ ೧ ॥

**ಮಟ್ಟತಾಳ** ॥ ತನ್ನಿಂದೊಂದೆರಡು ಗುಣದಿಂದುತ್ತುಮರ ಮೊದಲು ಮಾಡಿ । ಬ್ರಹ್ಮನಾ ಪರಿಯಂತವು । ಇವರುತ್ತಮರು ಇವರಿಂದಿವರು ನೀಚ ರೆಂದರಿತು । ಅನೇಕ ಜನುಮದಲಿ ಸಾಧನವನು ಮಾಡುತಾ । ಶ್ರವಣ ಮನನ ನಿದಿಧ್ಯಾಸನಗಳಿಂದ । ನವವಿಧ ದ್ವೇಷರಹಿತನಾಗಿ ನವವಿಧ ಭಕುತಿಯನೆ ಮಾಡಿ । ಪಂಚಭೇದಾ ಸಹಿತವಾದ ಜಗವೆಂದು ತಿಳಿದರೆ । ಅವನೆ ಮುಕ್ತಿಯೋಗ್ಯ ಪುರಂದರಾವಿಠಲಾ ॥ ೨ ॥

**ರೂಪಕತಾಳ** ॥ ವರ್ಣಾನಾಮಕ ನೀನು ಏಕಾಧಿಕವಾಗಿ । ಪಂಚಾಶದ್ವರ್ಣಂಗಳಲ್ಲಿ ನಿಯಾಮಕನಾಗಿ । ತಚ್ಛಬ್ದವಾಚ್ಯನಾಗಿ ವರಣದಿಂದ ಭರಿತವಾದ । ಓಂಕಾರ ಅಕಾರ ಉಕಾರ ಮಕಾರದಿಂದ । ತುಂಬಿಸಲಾಗಿ ಆ ಆ ಆ ಪುರಂದರವಿಠಲ ಅನಂತವೇದಾರ್ಥ ॥ ೩ ॥

**ತ್ರಿಪುಟತಾಳ** ॥ ಆರಕ್ಷರವುಳ್ಳ ವ್ಯಾಹೃತಿಯಿಂದ ಓಂಕಾರ ವಿಸ್ತಾರವಾಗುವದು । ಇಪ್ಪತ್ತನಾಲಕು ಅಕ್ಷರವುಳ್ಳ ಗಾಯತ್ರಿ ಪ್ರತಿಪಾದನೆ ಮಾಡುವಲ್ಲಿ । ಪುರುಷಾಸೂಕ್ತದಿಂದ ವಿಸ್ತಾರ ವಿಸ್ತರಿಸಿ । ಅನಂತವೇದ ಪ್ರತಿಪಾದಕವಾದ ಸರ್ವಾರ್ಥಗಳನು ವೇದಗಳು । ಪೇಳುವದು ಓಂ ಅಶೇಷ ಗುಣಾಧಾರ ಇತಿ ನಾರಾಯಣಾ ಪ್ಯಸೂಪೂರ್ಣಯೋ ಭೂತಿವರ್ಣಯಾ ಗುಣನತೆ ಭಾರತಿ ಜ್ಞಾನರೂಪತ್ವಾ ಅಖಿಳಜನ ಪ್ರೇರಣಾಜಾಂ । ಅಶೇಷಾ ಬುದ್ಧಿನಾಸ ಗಾಯತ್ರಿಯರ್ಥಾ । ಇತಿ ಉಪನಿಷತ್ಪರ ನಿನ್ನ ಪರ ಓಂಕಾರ ವಾಚ್ಯ ಸರ್ವೇಶ ಪುರಂದರವಿಠಲಾ ॥ ೪ ॥

**ಅಟತಾಳ** ॥ ಅಪೌರುಷ ವೇದವೆಂಬಾದಲ್ಲಿ ವೇದ್ಯ ನೀನೆಂದು ವೇದಾಂತ । ವೇದಾಂತವೇದ್ಯ ನೀನೆಂದು ಮತ್ತೆ ಭಾರತದೊಳಂಶದಲ ಯುಳ್ಳಾ ಗುಣರೂಪಗಳು ಸಾರ್ವಭೌಮ ಬಲ್ಲನು । ಆತನಿಂದೆ ವಾಣೀ ಭಾರತೀರು ಬಲ್ಲರು ಇವರಿಂದ ಅನೇಕ ಗುಣಕೆ ನೀಚನಾಗಿ ಮಹರುದ್ರ ತಾ ಬಲ್ಲ । ಉಪದೇಶದಿಂದ ಉಮಾದೇವಿಯರು ಬಲ್ಲರು । ಉಮೆಯಿಂದ ಇಂದ್ರ ಕಾಮರು ಬಲ್ಲರು । ಸಕಲ ದೇವತೆಗಳು ಸಿರಿದೇವಿಯರ ಕಟಾಕ್ಷದಿಂದ ಬಲ್ಲರರಿಯರು । ಅನೇಕ ಗುಣಗಳಿಂದ ನೀಚೋಚ್ಚಭಾವಗಳಾಗಿ ।

ತಮ್ಮ ತಮ್ಮ ಯೋಗ್ಯತಾನುಸಾರದಿ ಬಲ್ಲರರಿಯರು । ಪುರಂದರವಿಠಲನ್ನ ಸಾಕಲ್ಯವಾಗಿ ಬಲ್ಲರರಿಯರು ॥ ೫ ॥

**ಆದಿತಾಳ** ॥ ಸಂಕರ್ಷಣಾನೆಂದೆನಿಸಿ ಶಂಕರಂತರ್ಯಾಮಿಯಾಗಿ ಸಂಹಾರಕಾಲದಲಿ ಸಂಹಾರಮಾಡುವಿ। ಸರಸಿಜೋದ್ಭವನಲಿ ವಾಸುದೇವಾನಾಗಿ ಸೃಷ್ಟಿಯಾ ಮಾಡುವೀ । ಅನಿರುದ್ಧನೆನಿಸಿ ಪಾಲನೆಯಾ ಮಾಡುವಿ। ಅನಾದಿಕಾಲದಿ ನಿತ್ಯ ನೀನು ಅವಾಂತ್ರರು ಬ್ರಹ್ಮರು ಅವರೆ ರುದ್ರರು । ಅಮುಕ್ತ ಸ್ಥಳದಲ್ಲಿ ಚತುರ್ಮುಖ ಇಂದ್ರಾದಿಗಳು । ಭವಸುರರು ನಿನ್ನನು ತುತಿಸಿ ವಾಲ್ಗೈಸೆ ಮತ್ಸ್ಯ ಕೂರ್ಮ ವರಹನಾಗಿ । ದುಷ್ಟರಾ ತರಿದು ಶಿಷ್ಟರ ಪಾಲಿಪನೆಂಬಾ ಬಿರಿದು ಸಲ್ಲುವದು । ಶರಣಾಗತ ವಜ್ರಪಂಜರ ಪುರಂದರ ವಿಠಲರೇಯಾ ॥ ೭ ॥

**ಏಕತಾಳ** ॥ ಶ್ವೇತದ್ವೀಪದಲ್ಲಿ ಅಮುಕ್ತ ಸ್ಥಳದಲ್ಲಿ । ಚತುರ್ಮುಖ ಭವ ಇಂದ್ರಾದಿ ಸುರರು । ಭೂಭಾರವನಿಳುಹಬೇಕೆಂದು ನಿನ್ನಾ । ತುತಿಸಿ ತುತಿಸಿ ಬಹುಕಾಲದಿ ಮಚ್ಛ ಕೂರ್ಮ ವರಹನಾಗಿ ಕಾಲಕಾಲದಲ್ಲಿ । ದುಷ್ಟರಾ ತರಿದೊತ್ತಿ ಶಿಷ್ಟರಾ ಪರಿಪಾಲಿಪೆನೆಂಬ ಬಿರಿದು ನಿನ್ನದಯ್ಯಾ । ಶರಣಾಗತ ವಜ್ರಪಂಜರ ಪುರಂದರಾವಿಠಲಾ ದೇವಶಿರೋಮಣಿ ॥ ೭ ॥

**ಜತೆ** ॥ ಪರರೊಳು ಪರ ನೀನು ಈಶ ಯೆಂಬವರಿನ್ನು । ಶಿರಿಅಜಭವರಿಂದ ವಂದಿತ ಪುರಂದರವಿಠಲರೇಯಾ ॥ ೮ ॥ ಶ್ರೀಃ ॥

---

## ೪೦. ಸುಳಾದಿ.

**ಧ್ರುವತಾಳ** ॥ ಸ್ವರ್ಗ ಮರ್ತ್ಯ ಪಾತಾಳಗಳಲ್ಲಿ ತಿರುಗಿ ತಿರುಗಿ ಬಳಲಿದೆನೊ । ದೇಹಯೋಗ ದೇಹವಿಯೋಗ ಹೆಮ್ಮೆಮಾತುಗಳಿಂದ ಬಳಲಿದೆನೊ। ಯಮನಪಟ್ಟಣ ಎಂಭತ್ತೊಂಭತ್ತು ಸಾಸಿರಯೋಜನದೂರಾ ನಾನು ಪೋಗಿ ಪೋಗಿ ಬಂದು ಬಂದು ಬಳಲಿದೆ ಬಳಲಿದೆನಯ್ಯಾ । ನರಕಯಾತನೆಯುಂಡು ಬಳಲಿದೆನೊ। ಅಲ್ಲಿ ವೈತರಣಿಯಾ ಈಸಿ ಬಳಲಿದೆನೊ। ಪುರಂದರ

ವಿಠಲಾ ವಿಠಲಾ ವಿಠಲಾ ಇನ್ಯಾರೆ ಇನ್ಯಾರೆ ಕರುಣಿಸೊ ಕರುಣಿಸೊ ತಂದೆ ದಮ್ಮಯ್ಯ ॥ ೧ ॥

**ಮಟ್ಟೆತಾಳ** ॥ ಸಂಚಿತಕರ್ಮಗಳನಂತ ಕೋಟಿಕೋಟಿ ಪ್ರಾರಬ್ಧ ಕರ್ಮಗಳನಂತ ಕೋಟಿಕೋಟಿ । ಆಗಾಮಿಕರ್ಮಗಳನಂತ ಕೋಟಿಕೋಟಿ ಪುರಂದರವಿಠಲನ ಕಂಡಲ್ಲದೆಲ್ಲಿಯು ಮುಕ್ತಿ ॥ ೨ ॥

**ರೂಪಕತಾಳ** ॥ ಜ್ಞಾನ ಭಕ್ತಿ ವೈರಾಗ್ಯವಿಲ್ಲದ ಮನುಷ್ಯಜನುಮ ವಿನ್ಯಾತಕೆ ಸುಡು ಸುಡು । ಆಹಾರ ಭಯ ನಿದ್ರೆ ಸ್ತ್ರೀಸಂಗವೆಂಬವರೆ ಪಶು ಪಕ್ಷಿ ಮೃಗ ಮರ್ಕಟಕ್ಕೆ ಸರಿ । ಆ ನಾಥ ಪುರಂದರವಿಠಲನ ನೆನೆವ ಕ್ರಿಮಿಕೀಟ ಪಕ್ಷಿ ಜನುಮವೆ ಸಾಕು ॥ ೩ ॥

**ಝಂಪೆತಾಳ** ॥ ಈ ಕೃಚ್ಛ್ರ ತಪದಿಂದ ಬರಿದೆ ಬಳಲುವವರು । ಗೋವತ್ಸಪದದಂತೆ ಭವಸಾಗರವ ದಾಟಿ । ಆ ಚಿತ್ಸುಖನ ಲೋಕ ಈಸಬಲ್ಲವರು ॥ ಗೋ ॥ ಶ್ರೀವತ್ಸ ಚಿತ್ರ ಶ್ರೀಪುರಂದರವಿಠಲನವರು ॥ ೪ ॥

**ಏಕತಾಳ** ॥ ಸಾಸಿರಶಿರನೆ ಸಾಸಿರಲೋಚನನೆ ಸಾಸಿರಭುಜನೆ ಸಾಸಿರಕರನೆ । ಸಾಸಿರವುದರನೆ ಸಾಸಿರಚರಣನೆ ಸಾಸಿರ ನಮೊ ನಮೊ ಪುರಂದರವಿಠಲರಾಯ ॥ ೫ ॥

**ಜತೆ** ॥ ........................ ........................ ..................................................

## ೪೧. ಸುಳಾದಿ.

**ಧ್ರುವತಾಳ** ॥ ಪ್ರಳಯೋದಕದಲ್ಲಿ ವಟಪತ್ರಶಯನನಾಗಿದ್ದ ಕಾಲದಲ್ಲಿ । ಶ್ರೀದೇವಿಯರು ಶ್ರೀಭೂದುರ್ಗಾರೂಪದಿ ನಿಂದು । ದಕ್ಷಿಣಾಯಜ್ಞ ನಾಮದಿಂ ವೇದಗಳಿಂದ ಕೊಂಡಾಡುವ ಮುಖ್ಯಾಭಿಮಾನಿಯಾಗಿ । ವರ್ಣನಾಮಕರಿಂದ ನಿತ್ಯ ನಿಗಮಾರ್ಥಗಳಿಂದ ಸ್ತುತಿಸುವಳು । ಮಿತಿಯೆಂದು ಬೊಮ್ಮನ ನೂರಾರೇಳೆಂಟು ಭಾಗದೊಳೊಂದು ಭಾಗವಿರೆ । ಲಕುಮಿ

ದೇವಿ ತಾ ಪ್ರೇರಕಳಾಗಿ ಸ್ತುತಿಸುವಂದದಿ ಪ್ರೇರಿಸಲಾಗ । ಪ್ರಾರ್ಥನೆಯನು ಮಾಡಿಸಿಕೊಂಬಲ್ಲಿ ನಿರೂಪಿಸಿದನು ಪುರಂದರವಿಠಲಾ ॥ ೧ ॥

**ಮಟ್ಟೈತಾಳ** ॥ ನೂರುವರುಷವು ಇಂದ್ರಾಯಿತೆನಲು ಉದಯಕಾಲದಿ । ಚತುರದಶ ಭುವನಾತ್ಮಕವಾದ ಕಮಲದಲ್ಲಿ ಚತುರಮುಖ ಬೊಮ್ಮನ ಪಡೆದಿ ನೀನೂ । ನಮ್ಮ ಬಂದು ನಿನ್ನ ಪ್ರಳಯೋದಕವನ್ನು ತೆರೆಗಳ ನೋಡಿ ಏನು ಕಾಣದೆ । ಪೊಕ್ಕುನಾಳಾದಲ್ಲಿ ಮತ್ತೊಮ್ಮೆ ಬರಲು ಘೋರವಾದ ನಿನ್ನ ರೂಪವ ಕಂಡು । ಅಂಜಿ ಮತ್ತೆ ನಿನ್ನ ಉದರಪ್ರವೇಶವಾದಾ । ಒಂದು ಭಯವು ಯೆರಡು ಜ್ಞಾನವು ನಿನ್ನ ವಿಷಯದಲ್ಲಿ ಉಂಟಾದಡಾಗಲಿ। ಕಂತುಜನಕಾ ತಪತಪ ಎನಲಾಗಿ ತಪವನು ಮಾಡಿದಾ ಪುರಂದರವಿಠಲನ್ನ ನೀ ವಲಿಸಿ ಸೃಷ್ಟಿಯ ಮಾಡಿದ ಅಜಭವನು ॥ ೨ ॥

**ರೂಪಕತಾಳ** ॥ ಸೂಕ್ಷ್ಮರೂಪದಲ್ಲಿಪ್ಪತ್ತುನಾಲ್ಕು ತತ್ವಗಳ ಹೊರಗೆ । ಪಂಚಭೂತಂಗಳಿಗಭಿಮಾನಿಯಾದ ಗಣೇಶ ಮೊದಲಾದ । ಪಂಚಭೂತಂಗಳ ಸೃಜಿಸಿದನಾಗ ಒಂದೊಂದು ವರ್ಣದಾ ಅಭಿಮಾನಿಗಳಿಂದ। ಮಹತ್ತತ್ವಕ್ಕೆ ಬ್ರಹ್ಮ ಅಹಂಕಾರಾಧೀಶನೆಂದು ಬ್ರಹ್ಮಾಂಡವಾ ನಿರ್ಮಾಣ ಮಾಡಿ । ಪೂರ್ವದಂತೆ ದೇವತೆಗಳ ನಿರೂಪಿಸಿ ಬೊಮ್ಮಾಂಡದಿ ಆಧಾರವಾಗಿ ತನ್ನ ದೇಹವಾ ಬೆಳೆಸಿದಾ । ಚತುರಮುಖನಾಗ ಮೂಲರೂಪದಿಂದ ಪುರಂದರವಿಠಲಾ ವಿರಾಟದಲ್ಲಿ ವಾಸವಾಗಿ ನಿಂದಾ ಜಗದಾಧಾರಾ ॥ ೩ ॥

**ಝಂಪೆತಾಳ** ॥ ಬೊಮ್ಮಗೆ ಅಂದು ಅವ್ಯಾಕೃತದಲ್ಲಿ ವಿರಜೆಲಿ ಮಾಣಗಿಸಿ । ಉದರದಲ್ಲಿ ಪ್ರವೇಶ ಬೊಮ್ಮಾದಿಗಳು ಇರಲು । ಕೆಲವು ಲೋಕಂಗಳನು ಸೃಷ್ಟಿಯಾದ ಬಳಿಕಾ । ಶ್ವೇತದ್ವೀಪದಲ್ಲಿದ್ದ ಮೂರುತಿಯ ದರುಶನದಿ ಮುಕುತರೆನಿಸಿಕೊಂಡು । ಗಣನೆಯಿಲ್ಲದ ಅಪಾರರೂಪಂಗಳಲ್ಲಿ ಒಂದು ಮುಖದಿ । ಚತುರಮುಖನಿಗೆ ಸರ್ವಾಂಗ ಸಾಯುಜ್ಯವಿತ್ತಾ ಮಂಗಳಾಂಗನು ಪುರಂದರವಿಠಲಾ ಮುಕುತರೊಡೆಯನು ॥ ೪ ॥

**ಅಟತಾಳ** ॥ ಶ್ವೇತದ್ವೀಪವಾ ಸುತ್ತಿದ ಉದಕವು ಬೈಲಾದ ಮೇಲೆ। ಅಂಧಂತಮಸ್ಸು ಏಳುಕೋಟಿ ಪರಿಮಿತಿಯಾದ ನರಕವು । ಶುಕ್ಲಶೋಣಿತ ಮಿಶ್ರ ಅಗಾಧದಿಂದ ಮಿಶ್ರವಾದ ತಮಸ್ಸಿನೊಳು । ಪೂರ್ಣಸಾಧನವನು

ಮಾಡಿದ ಜನರಿಗೆ ಹರಿದ್ವೇಷ ಭಕ್ತರಲ್ಲಿ । ಅನಾದಿಕಾಲದಿ ದುಃಖಭಾಜನ ರಾದ ಪಾಪಿಜೀವರನು । ವಾಯು ಭೃತ್ಯರಿಂದ ಪ್ರೇರಿಸಿ ಗದೆಯಲ್ಲಿ ಲಿಂಗ ಶರೀರವಾ । ಹೋಳುಮಾಡಿ ಕೆಡಹಿ ಅಂಧಂತಮಸ್ಸಿನೊಳು ಕ್ರಿಮಿಪಕ್ಷಿಗ ಳಿಂದ ಬಾಧೆಯಲ್ಲದೆ । ಪರ್ವತಗಳ ತಂದು ಬಿಸಾಡುವ ಭೀಮನ ದೂತ ರಿಂದ ನೊಂದು । ದುಃಖಭಾಜನರಾದ ಪಾಪಿಜೀವರಿಗೆ ಎಂತು ಮಾಡಿದರೆ ಅಂಥಾ ಫಲವೀವಾ ಕಂತುಜನಕ ಪುರಂದರವಿಠಲಾ ॥ ೫ ॥

**ಏಕತಾಳ** ॥ ಇಂತ ಪ್ರಕೃತಿಸಾಧನವಾದ ಬೊಮ್ಮ ರುದ್ರ ಇಂದ್ರ ದಿಕ್ಪಾಲಕರು । ಮತ್ತೆ ದೇವತೆಗಳು ಮನುಮುನಿಗಳು ಶರೀರಗಳಲ್ಲಿ ವಾಸ ವಾಗಿ । ಪುರಂದರವಿಠಲಾ ಸೃಷ್ಟಿಸ್ಥಿತಿಲಯಕಾರಣ ॥ ೬ ॥

**ಜತೆ** ॥ ಕರ್ಮಜಡಂಗಳು ಮರ್ಮವ ತಿಳಿದು ಫಲವೀವಾ । ನಿರ್ಮಲ ಸ್ವತಂತ್ರ ಪುರಂದರವಿಠಲಾ ॥ ೭ ॥ ತ್ರೀಣಿ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೪೨. ಸುಳಾದಿ.

**ಧ್ರುವತಾಳ** ॥ ವಿಶ್ವವ್ಯಾಪಕ ಮೂರುತಿಯಾಗಿ ಅವ್ಯಾಕೃತವನು । ವ್ಯಾಪಿಸಿ ಸುಗಂಧ ವಾಸಿಸಿದಂತೆ ॥ ಬೊಮ್ಮಾಂಡ ಅವ್ಯಾಕೃತವು ಬಿಗಿದಪ್ಪು ವಾ ನಿನ್ನ । ವಿಶ್ವಮೂರುತಿ ಒಂದಿಪ್ಪುದು ಸರ್ವಕಾಲದಲ್ಲಿ ॥ ಬೊಮ್ಮಾಂಡ ವೆಲ್ಲವೆ ಒಂದು ಘನ ಅಂಗುಷ್ಠವೇ ವ್ಯಾಪ್ತ । ಸರ್ವದೇಹಾವಕಾಶವಾಗಿಪ್ಪ ಅವ್ಯಾಕೃತವೆ ವಿಶ್ವಾ ॥ ಈ ಮಹಾಮೂರುತಿಯಲ್ಲೆ ಒಂದನಂತವಾಗಿಪ್ಪ ಶ್ರೀಮೂರುತಿಗಳೂ । ಅದರಲ್ಲಿಪ್ಪವು ಒಂದೊಂದು ಮೂಲೆಯಲ್ಲಿ ಸಹಸ್ರ ಬ್ರಹ್ಮಕಲ್ಪದ ಜೀವರಲ್ಲಿರುವಾರು ರೋಮರೋಮಾ ಬೊಮ್ಮಾಂಡಗಳೆಲ್ಲ ಕಾರಣ ॥ ಈಮೂರ್ತಿವ್ಯಾಪ್ತಿಯಿಂದ ॥ ಲಕುಮಿದೇವಿ ವುಪಾಸನೆಯಾ ಮಾ ಡುವೆನೆಂದು ಧ್ಯಾನಿಪಳು ಪ್ರತ್ಯಕ್ಷವಾಗುವದು । ಗುಣಗಳು ಕಡೆಗಾಣಲಾ ರದೆ ಸಾಕಲ್ಯವಾಗಿ ಲಕುಮಿದೇವಿ ಗುರುಪುರಂದರವಿಠಲಾ ವಿಶ್ವಾ ॥ ೧ ॥

**ಮಟ್ಟೆತಾಳ** ॥ ಶಿರಿ ಸರಸಿಜೋದ್ಭವ ವಾಣಿ ಭಾರತಿಯರು । ಪರಶು ಕ್ಲತ್ರಯರಿವರು ಮೂಲವಾಯು ಕೂಡಿ । ಲಕುಮಿ ಒಡೆಯನ ಗುಣಂಗ ಳನು ಇವರು ಕಡೆಗಾಣದೆ । ಮೂರುತಿಯಿದ್ದು ಸರಸಿಜೋದ್ಭವ ಮಹತತ್ವದಿ ಕುಳಿತ ಪರಿಯಂತವು । ತನ್ನಭಿಮಾನಯುಲ್ಲುಳ ಅಲ್ಲಿ ಪರಿಯಂತ ಬಲ್ಲಾ ಕೆಲವು ರೂಪಾ । ಅವ್ಯಾಕೃತದಲ್ಲಿ ವ್ಯಾಪ್ತವಾದುದಾ ತಾರಾಮಂಡಲದಂತೆ ಕಾಂಬಾ ಪಂಚಮುಖದಿ । ದೇವತೆಗಳು ಗರುಡ ಶೇಷ ರುದ್ರ ತನ್ನಭಿಮಾನ ಯಲ್ಲುಳ ಅಲ್ಲಿ ಪರಿಯಂತ ಬಲ್ಲರು । ಕೆಲವು ರೂಪಾ ಮಹತತ್ವದಲ್ಲಿ ವ್ಯಾಪ್ತ ವಾದುದಾ ತಾರಾಮಂಡಲದಂತೆ ಕಾಂಬರು । ಮತ್ತೆ ದೇವತೆಗಳು ತಮ್ಮ ಸ್ವರೂಪದಂತಿಪ್ಪರು । ಅಳವಿಲಿ ಕೆಲರು ನಖವಾ ಕಾಂಬೊರು । ಇಂಥಾ ವ್ಯಾಪ್ತಿಗಳುಳ್ಳಾ ಮೂರುತಿಯಾಗಿಪ್ಪ ಗುರುಪುರಂದರವಿಠಲನ ಮಹಿಮೆಗೆ ನಮೊ ನಮೊ ॥ ೨ ॥

**ರೂಪಕತಾಳ** ॥ ಸ್ವಪ್ನದಲ್ಲಿ ಭೇದವುಳ್ಳ ಕಾರಣ । ಪರಿಮಾಣ ದೊಳು ಕಡಿಮೆಯುಳ್ಳ ಕಾರಣ । ಒಬ್ಬರಿಂದೊಬ್ಬರು ಉತ್ತಮರಾಗಿ ಸೇವಿಪ ರು । ನಿನ್ನ ಚರಣಕಮಲವಾ ಗುರುಪುರಂದರವಿಠಲನೆ ತಮ್ಮೊಳು ತಾವು ॥ ೩ ॥

**ಝಂಪೆತಾಳ** ॥ ಅಪಾರಮಹಿಮೆ ನೆರಹಿಕೊಂಡು ಅಪ್ರಮೇಯ ನಾಗಿ ನೀನು । ಸರ್ವದೇವತೆಗಳ ಒಂದೊಂದು ವ್ಯಾಪಾರದಲ್ಲಿ ಇಟ್ಟೆ । ಭೀಷ್ಮ ಎಂಬ ಶ್ರುತ್ಯರ್ಥದಿಂದ ಭೂತವಾಯು ತನ್ನಿಂದ ಮಿಕ್ಕದೇವತೆಗಳ । ಪ್ರೇರ ಕತ್ರಮದಿಂದ ಸೂತ್ರನಾಮಕನು ತಾ ಸರ್ವದೇವತೆಗಳೊಳು । ಒಬ್ಬ ಭಾಳಿ ಯಾಗುವ ಅಗ್ನಿಯಾಗಿ ದಹಿಸುವ ಒಬ್ಬ । ಅಗ್ನಿಯಾಗಿ ದಹಿಸುವಾ ಒಬ್ಬ ಸದಾ ಬೆಳಗುತಿಪ್ಪಾ ಒಬ್ಬ । ಸರ್ವರ ದಂಡಿಸುವಾ ಒಬ್ಬ ಶೀತಳವಾಗಿ ತನ್ನಿಂದಲನುಸುಖವ ಜಗಕೆ ಎಂತು ಮಾಡುವರು । ಬಿಡದೆ ಮೃತ್ಯು ಬಂದು ಅರಸಿಕೊಳುತಿಪ್ಪದು । ಈ ಸರ್ವವ್ಯಾಪಾರವು ಹರಿಯ ಆಧೀನದಿಂದ ಚತು ರ್ಮುಖನು । ಅನಂತ ಚತುರ್ಮುಖರಿಂದ ಸೇವಿತ ಪಾದವುಳ್ಳ । ಪಟ್ಟೆ ದರಸು ಗುರುಪುರಂದರವಿಠಲಯ್ಯಾ ॥ ೪ ॥

**ತ್ರಿಪುಟೆತಾಳ** ॥ ಪ್ರಾಣಾಪಾನ ವ್ಯಾನೋದಾನ ಸಮಾನವಾಯು ನಾಮಕನಾಗಿ ಮುಖ್ಯಪ್ರಾಣ ಅವರಲ್ಲಿದ್ದು ಪ್ರೇರಿಸುವಾ । ಮುಖ್ಯನೀತನು

ಅಮುಖ್ಯರವರು ಪ್ರಾಣನಿಂದ ನಿನ್ನ ರೂಪವು ಪ್ರಾಣ ಶಬ್ದವು ಮೂಲದಿಂದುಳ್ಳ ಪರಮಸುಖನಿಧಿ ಮುಖ್ಯನೀತನು ವ್ಯಾಪ್ತನಾಗಿ ಪ್ರೇರಿಸುವಿ । ಗುರು ಪುರಂದರವಿಠಲರೇಯನ ಅನಾದಿ ನಾಮಾ ॥ ೫ ॥

**ಅಟತಾಳ** ॥ ನಾಭಿದೇಶದಲ್ಲಿ ವಾಯುರೂಪದಲ್ಲಿ ವಾಯುಬೀಜನಾಗಿ ವಾಯುವಂತರ್ಗತನಾಗಿ ಶೋಷಿಸುವಿ ದುಷ್ಕರ್ಮಿಯಾ । ಹೃದಯಸ್ಥಳದಲ್ಲಿ ತ್ರಿದಳಕಮಲದಲ್ಲಿ ಅಗ್ನಿಬೀಜನಾಗಿ ಅಗ್ನ್ಯಂತರ್ಗತನಾಗಿ ದಹಿಸುವಿ ಮತ್ತೆ ಕೆಲವು ಪಾಪವಾ । ಶಿರೋಭಾಗದಲ್ಲಿ ವರುಣರೂಪದಲ್ಲಿ ವರುಣಬೀಜನಾಗಿ ವರುಣಾಂತರ್ಯಾಮಿಯಾಗಿ ವೃಷ್ಟಿಯಾ ಸುರಿಸುವಿ ಅಮೃತಪಾತಕನಾಮಕನಾಗಿ ಸರ್ವಫಲವಾನೀವಿ ಕರ್ಮದ ಸುಖ ಗುರುಪುರಂದರವಿಠಲಾ ॥ ೬ ॥

**ಏಕತಾಳ** ॥ ಪ್ರಾರಬ್ಧಸಂಚಿತ ಆಗಾಮಿಗಳಿಂದ ಅಧಿಕವಾದುದ ಮಹಾ ದುಷ್ಕರ್ಮಿಗಳಿಗೆ ಮುಕುತಿಯೋಗ್ಯರಿಗೆ ಕರುಣೆ ನೀ ದಯಮಾಡಿ । ವಿಾರಿದ ದುಷ್ಕರ್ಮವ ಕಲಿಗೆ ಈವಿ ತಮ್ಮ ಸ್ವರೂಪವಾ ವಿಾರಿ ಸುಕೃತವಾ ಮಾಡಿದರೆ ದೇವತೆಗಳಿಗೆ ಈವೆಯಾಗಿ ॥ ಮು ॥ ಎಂಥಾದರೆ ಸ್ವರೂಪ ಸುಖವಿತ್ತು ಸಲಹುವಿ ಅನುಪಮಗುಣ ಗುರುಪುರಂದರವಿಠಲಾ ॥ ೭ ॥

**ಜತೆ** ॥ ಸರ್ವಕರ್ಮಗಳ ಪ್ರಾಣಾಂತರ್ಯಾಮಿಯಾದ ಶ್ರೀಹರಿಗೆ ಅರ್ಪಿಸಿದರೆ । ಒಂದೊಂದು ಅನಂತಫಲ ಮಾಡಿ ತೋರುವಾ ಗುರುಪುರಂದರವಿಠಲರೇಯನು ಅನಾದಿ ಕಾಲದಲಿ ॥ ೮ ॥

## ೪೩. ಸುಳಾದಿ.

**ಧ್ರುವತಾಳ** ॥ ಆದಿಮೂರುತಿಯಾಗಿ ಅವ್ಯಾಕೃತ ಆಕಾಶದಲ್ಲಿ ಅನಾದಿನಿತ್ಯನೆನಿಸಿ ಸತ್ಯವಾದ ಜಗದೊಳು ಸುತ್ತಿ ನಿನ್ನವತಾರಂಗಳ ಮಾಡುತಲೆ । ಅನಾದಿಸ್ವಭಾವದಿಂದ ಸತ್ಯಸಂಕಲ್ಪನೆನಿಪ ನಿನ್ನಿಚ್ಛೆಯಿಂದ ಅಜಭವಾದಿ ಜೀವರಾ ಸೃಜಿಸುವಿ ಆದಿಯಲಿ ಸೂಕ್ಷ್ಮವಾದ ಇಪ್ಪತ್ತುನಾಲ್ಕು

ತತ್ವಗಳಿ ಬ್ರಹ್ಮಾಂಡದ ಹೊರಗೆ ಸೃಜಿಸಿ ಗುಣತ್ರಯವುಪಾದಾನ ಕರಣ ವನು ಮಾಡಿ ಇಂತು ಲೋಕಂಗಳಾ ಮಹತತ್ವ ಅಹಂಕಾರಗಳಿಂದ ರಾಜಸ ಮಿಶ್ರದಿ ತ್ರಿಗುಣವಾದ ಜಗವಾ ನಿರ್ಮಿಸಿ ಗುಣಪೂರ್ಣ ಗುರುಪುರಂದರ ವಿಠಲರೇಯನು ಅನಾದಿಕಾಲದಲ್ಲಿ ॥ ೧ ॥

**ಮಟ್ಟೆತಾಳ** ॥ ಗೋವಿಂದನೆನಿಸಿ ವೇದಪ್ರತಿಪಾದ್ಯನಾಗಿ ಶ್ವೇತದ್ವೀಪದಿ ವಾಸವ ಮಾಡಿ । ಅನಂತನೆನಿಸಿ ನೀನು ಅನಂತಮೂರುತಿಗಳಿಗೆ ಭೇದ ವಿಲ್ಲದ । ಅನಂತಶಯನನಾಗಿ ನಾಶರಹಿತನಾದ ಅಚ್ಯುತನೆಂಬ ನಾಮಾ ವೈಕುಂಠಪತಿ ಗುರುಪುರಂದರವಿಠಲಾ ನಾಶರಹಿತಾ ॥ ೨ ॥

**ರೂಪಕತಾಳ** ॥ यतो वाचो निवर्तन्ते अप्राप्य मनसा सह ಎಂದು ಶ್ರುತಿ ಗಳು ನಿಮ್ಮ ಅನಂತ ಸಮೂಹಗಳಾಗಿ ಅನಾದಿಯಿಂದ ತುತಿಸಿ ಗುಣಗಳು ಕಡೆಗಾಣಲಾರದೆ ಮರಳಿದಾ । ವೇದಾಭಿಮಾನಿ ದೇವತೆಗಳು ಅನಂತವೇದ ದಿಂದ ಭಾರತವಿಸ್ತಾರದಿಂದ ಮತ್ತೆ ಗುಣಗಳ ಕಾಂಬಾ । ಚತುರಮುಖನು ಇದರಂತೆ ಲಕುಮಿ ನಿನ್ನ ಗುಣಗಳನು ತುತಿಸಿ ನಖದ ಕೊನೆಬಣ್ಣವ ಕಾ ಣದೆ ಆನಂದಶರಧಿಯಲ್ಲಿ ಮುಳುಗ್ಯಾಡಿದಳೊ । ಮುಕ್ತಾಮುಕ್ತರಿಂದ ವಂದಿ ತಚರಣ ಗುರುಪುರಂದರವಿಠಲಾ ಅನಂತಚರಿತಾ ॥ ೩ ॥

**ಅಟೆತಾಳ** ॥ ಅನಂತಾ ದೇಶದಲ್ಲಿ ಅನಂತ ಕಾಲದಲ್ಲಿ ಅನಂತ ಗುಣ ಗಳಿಂದ ಅಪರಿಚ್ಛಿನ್ನನಾದ ಸಮಾಭ್ಯಧಿಕ ಅವಿರಳ ಬ್ರಹ್ಮಾಂಡಗಳ । ಒಂ ದೊಂದು ರೋಮಕೂಪದಲ್ಲಿ ಪುರಗಿಪ್ಪೆ ಅಚಿಂತ್ಯನೆನಿಸಿ। ಪ್ರತಿ ಬ್ರಹ್ಮಾಂ ಡಗಳಲ್ಲಿ ಅಜಭವಸುರರು ಅನಂತಾನಂತ ರಾಶಿ ಜೀವರಿಂದ ಭರಿತರಾಗಿ । ನಿನ್ನಾನಂತಾನಂತ ರೂಪಾನಿಬಿಡವಾದ ವಿಶ್ವವನ್ನು ಕಂಡು ಭ್ರಾಂತಳಾಗಿ ಲಕುಮಿ ಚರಣಕಮಲವನ್ನು ವಂದಿಸಿದಾಳು । ಗುರುಪುರಂದರವಿಠಲಾ ಸರ್ವೋತ್ತುಮಾನೆಂದು ಧ್ಯಾನಿಪಳೆಂತೊ ಸುಖಭರಿತಳಾಗಿ ॥ ೪ ॥

**ಏಕತಾಳ** ॥ ಒಂದೊಂದವಯುವದಲ್ಲಿ ಸಾಯುಜ್ಯವೆಂದು ಗರುಡ ಶೇಷ ರುದ್ರ । ಇಂದ್ರ ತಾನು ಭಾಸ್ಕರ ಚಂದ್ರಾನಯನವೆ ಮೊದಲಾಗಿ । ಪ್ರತಿ ಅವಯುವದಲ್ಲಿ ಮುಕ್ತರೆನ್ನಿಸಿ ಅಚ್ಛಿನ್ನ ಮುಖ್ಯಪ್ರಾಣನಿಗೆ । ನೀನು

ಸಾರ್ವಭೌಮ ಪಟ್ಟವನ್ನುಗಟ್ಟಿ ಮೇಲೆ ಮುಕುತಿಯನೀವಿ ಗುರುಪುರಂದರಾ ವಿಠಲಾ ಎಣಿಸಲಳವೆ ನಿನ್ನ ಗುಣಗಳಾ ॥ ೫ ॥

**ಜತೆ** ॥ ಆದಿ ಮಧ್ಯಾಂತಗಳಿಲ್ಲದ ಅಪಾರ ವರ। ದಿಂದುತ್ತಮ ಗುರು ಪುರಂದರವಿಠಲಾ ॥ ೬ ॥

## ೪೪. ಸುಳಾದಿ.

**ಧ್ರುವತಾಳ** ॥ ಸರ್ವಜ್ಞ ಹರಿಗೆ ಅಸರ್ವಜ್ಞತೆಯಾ । ಸಾಕಾರ ಹರಿಗೆ ನಿರಾಕಾರತೆಯಾ । ನಿತ್ಯಮುಕ್ತಗೆ ಸಂಸಾರಬದ್ಧತೆಯಾ । ನಿತ್ಯ ತೃಪ್ತಗೆ ದುಷ್ಕೃತ ಭೋಕ್ತೃತೆಯಾ। ಆವಪ್ರಮಾಣವೆಂದು ಅರಿತು ಕಲ್ಪಿಸಿ ದಿಯೊ । ಏನು ನಿನಗೆ ವಿಷ್ಣುವಿನಲ್ಲಿ ದ್ವೇಷವೊ ಜನ್ಮದ ಅಘದಾಸೆ ಫಲಿಸಿ ತೊ। ಆವ ಭ್ರಮಿತವೊ ಭ್ರಮಿಸಿದಿಯೊ ಅಯ್ಯಾ । ನಿತ್ಯಮುಕ್ತನು ನಿತ್ಯ ಸುಖಿ ಎಂದು ಶ್ರೀವಿಷ್ಣು। ಸರ್ವೋತ್ತುಮಾ ಸಾಕಾರನೆಂದು ಶ್ರುತಿ ಸಾರುತ ಲಿದೆ। ಸಾಸಿರಮುಖದಿಂದ ಚತುರ್ಮುಖಾದಿ ದೇವರು । ನಿನ್ನ ಮೆಚ್ಚಿಸೆ ಚಿತ್ತಕಲುಷವ ಬಿಟ್ಟು ಭಕುತನಾಗೋ । ಗುರುಮಧ್ವಪತಿವಿಠಲಾ ನಿನಗೊ ಅವನೊ ॥ ೧ ॥

**ಮಟ್ಟೆತಾಳ** ॥ ಇಂದ್ರ ಮುಖ್ಯ ಸುರಾದಿಗಳೆಂಬ ಪರಿವಾರ। ಇಂದಿರೆ ಅರಸಿ ಬೊಮ್ಮಕುಮಾರ। ಇಂದುಮೌಳಿ ಮೊಮ್ಮಗಾ ಖಗೇಂದ್ರವಾಹನಾ। ಇಂದುರವಿಲೋಚನಾ ಎಂದು ಮೆರೆವ ನಮ್ಮ । ಗುರುಮಧ್ವಪತಿವಿಠಲನ ಮಹಿಮೆಗೆ ಸರಿಯುಂಟೆ॥ ೨ ॥

**ರೂಪಕತಾಳ** ॥ ಅಚ್ಯುತಾನೆನ್ನಿ । ಅನಂತನೆನ್ನಿ । ಗೋವಿಂದ ನೆನ್ನಿ। ಘೋರಾಘಹರನೆನ್ನಿ। ನಾರಾಯಣನೆನ್ನಿ। ನರಹರಿ ಎನ್ನಿ। ಗುರು ಮಧ್ವಪತಿವಿಠಲಾ ಸರ್ವಾಂತರ್ಯಾಮಿ ಎನ್ನಿ॥ ೩ ॥

**ಅಟತಾಳ** ॥ ಲೋಕದೊಳಗೆಮ್ಮ ದೇವರಿ ಸರಿ ಎಂಬ ಏಕನುಡಿ ಕಡೆ ಈಡೇರಲರಿಯದ। ಆ ಕಮಲಜ ಪದಪದ್ಮವಾ ತೊಳೆಯಲು ಆ ಕಪರ್ದಿ

ಪಾದಾಂಬುವ ಧರಿಸಲು ॥ ಕಾಕುಮತವ ಬಿಟ್ಟು ಮನಮುಟ್ಟನೆನೆ ಜಗ ದೇಕ ಗುರುಮಧ್ವಪತಿವಿಠಲನು ॥ ೪ ॥

ಏಕತಾಳ ॥ ಸಿರಿಯಡಿಗಳಿಗೆ ಶಿರಸಾ ವಹಿಸಬೇಕು । ಸರಸಿಜಸಂಭ ವಗೆ ಅಭಿನಮಿಸಬೇಕು । ಗಿರಿಜಾರಮಣಗೆ ಎರಗುತಿರಲುಬೇಕು । ಸುರಪತಿ ಮುಖ್ಯರ ಸುಖಬಡಿಸಲುಬೇಕು । ತಾರತಮ್ಯ ಭವಾದಿ ಅರಿತು ಭಜಿಸಿದರೆ। ಗುರುಮಧ್ವಪತಿವಿಠಲಾ ನಿಮಗೊಲಿವಾ ॥ ೫ ॥

ಜತೆ ॥ ಹರಿಯೆ ಸರ್ವೋತ್ತುಮಾ ಹರಿಯೆ ಪರದೇವತೆ ಹರಿಯೆ ಮಧ್ವಪತಿವಿಠಲನು ॥ ೬ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೪೫. ಸುಳಾದಿ.

ಧ್ರುವತಾಳ ॥ ನೀಲಮೇಘಶ್ಯಾಮಾ ಕೋಮಲಾಂಗದ ಮೇಲೆ । ಶಿರದಲ್ಲಿ ರಂಜಿಪ ಬಾಲಸೂರ್ಯ ಕೋಟಿತೇಜಾ । ರತುನಮುಕುಟ ಭಾಳ ದೊಳರಳೆಲೆ ಕಿವಿಗಳಲಿ ಮಾಗಾಯಿಗಳಾ । ಕಮಲನೇತ್ರದ ಮೂಲೋಕವ ಮೋಹಿಸುವ ನಾಸಿಕದ ಕಮಲವದನ । ವಿಶಾಲೋರಸ್ಥಳದ ಶಿರಿ ಶಿರಿಗಂಧ ಕೌಸ್ತುಭ ವೈಜಯಂತಿಮಾಲೆಯಂನಳಿತೋಳು ನಡುವಿನ ಪೀತಾಂಬರದಃ ಮೌಕ್ತಿಕಜಾಲದಲ್ಲಿ ನಖಡೆಯ ಪಿಂಡೆಯು ಪದಕಗಳೆಸೆಯೇ । ನೀಲಮೇಘ ಶ್ಯಾಮಾ ॥ ಆ ಆ ಆ ನತಜನಪಾಲಕನವತಾರವಾದಾ । ಬಾಲಲೀಲಾ । ಲೋಲ ಅಂಬೆಗಾಲುಕೃಷ್ಣ ನಿನ್ನ । ದಿವ್ಯಮೂರುತಿಯ ಯೆನ್ನ ಹೃದಯಃ ಆಲಯದೊಳರಿಸೂ । ಪರಮಾನಂದಶರಧಿಯಲಿ ಬಿಡದೋಲಾಡುವಂತೆನ್ನ ಮಾಡು । ನೀಲಮೇಘಶ್ಯಾಮಾ ॥ ೧ ॥

ಮಟ್ಟೆತಾಳ ॥ ಶುಕಶೌನಕ ಸನಕಸನಂದನಾ। ಸನತ್ಕುಮಾರಕ ಪ್ರಹಲ್ಲಾದಂಬರೀಷ । ನಾರದಾ ರುಗುಮಾಂಗದನಗಸ್ತ್ಯ । ದುರ್ವಾಸಾದಿ ಗಳು ಭಕುತಿಯಿಂದ। ಸಕಲ ಸುಖವ ಪಡದರರಿಯೆಂದಯ್ಯಯ್ಯಾ। ಭಕುತಿ

ಯಿಂದ ಸಕಲ ಸುಖವಾ ಪಡದರು । ರುಗುಮಿಣಿಪತಿ ಶಿರಿಅಂಬೆಗಾಲು ಕೃಷ್ಣಾ । ನಿನ್ನ ಭಕತಿಯ ಕೃಪೆಮಾಡೊ ದಮ್ಮಯ್ಯಾ ॥ ೨ ॥

**ರೂಪಕತಾಳ** ॥ ಸತಿಸುತರೊಳಗುಳ್ಳಾ ಸ್ನೇಹವ ನಿನ್ನೊಳುಳ್ಳಡೆ ಬದುಕುವೆನಿಹಪರದಲಿ । ಶ್ರೀಪತಿಯೆ ಗತಿಪತಿ ನಿನ್ನೆಂದೆಂಬಾ ॥ ಮತಿ ಮನ ದೊಳಗುಳ್ಳಡೆ ಬದುಕುವೆನಿಹಪರದಲಿ । ಶ್ರೀಪತಿಯೇ ರತಿಪತಿಪಿತ ಶಿರಿಅಂ ಬೆಗಾಲುಕೃಷ್ಣಾ । ಶ್ರೀಪತಿಯೇ ॥ ೩ ॥

**ಝಂಪೆತಾಳ** ॥ ಅರುಹುದೆಮ್ಮರುಹುವೆಮ್ಮೆಮ್ಮ ಯೆಚ್ಚ ಕನ್ನರರು ವೇ ಅಜ್ಞಾನತತ್ವದಿಂ ಮತ್ತರುಗೆನಾದೆ । ಅರೆನಾರಿ ಸಂಸಾರದುಃಪಟಳಕ್ಕೆ ಆ ಆ ಆ ಅರೆನಾರಿ ಸಂಸಾರದುಪಟಳಕ್ಕೆ । ಆರೆನಯ್ಯಾ । ಅಂಬೆಗಾಲು ಕೃಷ್ಣಯ್ಯಾ ॥ ೪ ॥

**ತ್ರಿಪುಟತಾಳ** ॥ ಮಾಯೆಯಾ ಭ್ರಾಂತಿಯಿಂದ ವೃಥಾ ನೊಂ ದೆನೂ । ಕಾಯೋ ಯಾದವರಾಯನೇ ಮುನಿಜನಧ್ಯೇಯ ನತಜನಪ್ರಿಯ ವರ್ಯನಯ್ಯಾ। ಕಾಯೋ ಯಾದವರಾಯಾನೆ ಮುನಿಜನಧ್ಯೇಯ ನತಜನ ಪ್ರಿಯ ವರ್ಯನಯ್ಯಾ । ಕಾಯೋ ಯಾದವರಾಯಾ । ಅಂಬೆಗಾಲು ಕೃಷ್ಣಯ್ಯಾ । ಕಾಯೋ ಯಾದವರಾಯಾ ॥ ೫ ॥

**ಅಟತಾಳ** ॥ ನಿನ್ನದೊಂದೊಂದು ಮಾಯಾನಟಣೆಗಳಿಂದ । ಜಗಂಗಳ ಮೋಹಿಸುತಿದೆ । ಇದೇನೆಂತು ತಿಳಿಯಬಾರದಜಭವಾದಿಗಳಿಗೆ । ಇಂದಿರೇಯರಮಣ ನಿನ್ನ ಕಂದನೆಂದೆನ್ನೂವ । ಮನ್ನಿಸಿ ಸಲಹಯ್ಯಾ । ಇಂದಿರೇಯ ರಮಣಾ । ಕೃಪಾಸಿಂಧು ಶಿರಿಅಂಬೆಗಾಲುಕೃಷ್ಣಯ್ಯಾ ॥ ೬ ॥

**ಏಕತಾಳ** ॥ ಸನ್ನುತನನುಪಮಮಹಮಹಿಮ್ಮಾ। ನಿನ್ನ ಮನದಲಿ ನೆನವರ ನೆನವಾ । ಇನಿತು ಬೇಡುವೆ ಕೊಡು ಮಹಾಮಹಿಮಾ । ಮಾನಿಸಿ ಶಿರಿಅಂಬೆಗಾಲುಕೃಷ್ಣಯ್ಯಾ । ನಿನ್ನ ಮನದಲಿ ನೆನವರ ನೆನವಾ ॥ ೭ ॥

**ಜತೆ** ॥ ಅಂಬೆಗಾಲುಕೃಷ್ಣನ ನಂಬಿ ಬದುಕಿ । ಕುಟುಂಬಿಯ ಮಾ **ಡುವೆ** ತನ್ನ ಪಕ್ಕದೊಳಿಟ್ಟು । ಅಂಬೆಗಾಲುಕೃಷ್ಣಾ ॥ ೮ ॥ ಶ್ರೀಃ ॥



## ೪೬. ಸುಳಾದಿ.

ರಾಗ ಭೂಪಾಳಿ.

**ಧ್ರುವತಾಳ** ॥ ಶ್ರೀಪತಿ ಸಲಹೆಂದು ನೆನವಂಥಾ। ಮನುಜರ ತಾಪ ತ್ರಯುವ ನೂಕಿ ಮುಕ್ತಿಯನೀವ ಕೃಷ್ಣಾ ಅಕಳಂಕಚರಿತ ಆಶ್ರಿತಜನಪ್ರಿಯನ। ಭಕ್ತವತ್ಸಲ ಸುರಧೇನು ಶ್ರೀಯರಸಾನು ಭಕ್ತಜನರ ದುಷ್ಕೃತಗಳ ಪರಿಹರ ಭುಜಗಶಯನ ಪ್ರಹಲ್ಲಾದ ವಂದಿತನು ಶ್ರೀಪತಿ ಸಲಹೆಮ್ಮ । ಸುರರು ಸುಮ್ಮನದಿ ಪೂಮಳೆಗರೆಯಲೂ । ಪರಮಪುರುಷವಿತ್ತು ಸಲಹುವ ಹರಿ ಯೆಂದು ನಿನ್ನ ನೆರೆನಂಬಿದೆನೂ। ಲೀಲಾವತಾರ ಪ್ರಸನ್ನಮೂರುತಿ। ಅಹೋ ಬಲ ನರಹರಿಕೃಷ್ಣಾ । ಶ್ರೀಪತಿ ಸಲಹೆಂದು ॥ ೧ ॥

**ಮಟ್ಟೆತಾಳ** ॥ ನಾರದಾದಿ ಅಂಬರೀಷ ಗೋವಾರ ಗಂಧರ್ವವಂದಿತ ಶ್ರೀರಮಣ। ಸರ್ವಪೂಜಿತಾ । ಗಂಭೀರಪುರುಷಾ । ಲಕ್ಷ್ಮೀವಲ್ಲಭ ಶ್ರೀರಮಣ ಸರ್ವಪೂಜಿತಾ । ಕಾರುಣ್ಯಮೂರ್ತಿ ಕಾಯೋ । ಕರುಣದಲಿ ದಾಸರ ನರಹರಿಕೃಷ್ಣರಾಯಾ ॥ ಶ್ರೀರಮಣ ॥ ೨ ॥

**ರೂಪಕತಾಳ** ॥ ದಾಸನಾಗಿಹೆನಯ್ಯಾ ದೋಷರಹಿತ ಕೃಷ್ಣಾ । ಶೇಷಶಯನ ಈಶಾಈಶವಂದಿತ ಸ್ವಾಮಿಾ । ಪೂಶರನಯ್ಯನೇ ಪುಣ್ಯ ಚಾರಿತ್ರ ಕೇಶವ ದೈತ್ಯ ಕಂಸಾಸುರಭಂಜನ। ವೇಷಧಾರಿಯೆ ಹರಿ ವೈಷ್ಣವ ಪ್ರಿಯನೇ ಪೂಶರನಯ್ಯನೆ ಪುಣ್ಯಚರಿತನೆ । ದೇಶಾಧಿಪತಿ ವೀರ ನರಹರಿ ಕೃಷ್ಣ ನಿನ್ನ ದಾಸನಾಗಿಹೆನಯ್ಯಾ ॥ ೩ ॥

**ಅಟೆತಾಳ** ॥ ಅಜಮಿಾಳ ಧ್ರುವ ಪ್ರಹಲ್ಲಾದ ನಾರದರಿಗೆ । ಸುಜನ ರೊಡೆಯ ಸ್ಥಿರಪದವಿಯನಿತ್ತು ಸಲಹಿದೆ । ಕುಜನ ಕೌರವ ಪೌಂಡ್ರಕ ಜರಾಸಂಧಗೆ । ವೃಜಿನಗತಿಯನಿತ್ತು ಕೋಟಲೆಗೊಳಿಸಿದೇ । ಭಜಕಜನ ರಕ್ಷಕ ಭಾನುಕೋಟಿತೇಜಾ। ವಿಜಯ ಸಿರಿದೇವಿಯರಸ ನರಹರಿ ಕೃಷ್ಣಾ । ಸುಜನರೊಡೆಯ ಸ್ಥಿರಪದವಿಯನಿತ್ತು ಸಲಹುವೆ ॥ ೪ ॥

**ಏಕತಾಳ** ॥ ಉಟ್ಟ ಪೀತಾಂಬರದುಡಿಗೆಯು। ಹರಿಯಿಟ್ಟ ಕಿರೀಟದ ಪ್ರಭೆಯೆಸೆಯಲೂ । ಕೋಟಿ ಶಂಖಚಕ್ರಧರನೆ । ಮುಕ್ತಿ ಭಜಿಪರ್ಗೆ ಮುದ

ವಿತ್ತೊ । ಸಲಹುವೆ ಸೃಷ್ಟಿಗೆ ಅಹೋಬಲ ನರಹರಿಕೃಷ್ಣಾ । ಇಷ್ಟಾರ್ಥವ ಕೊಟ್ಟು ರಕ್ಷಿಸು ಸ್ವಾಮಿಯಾ ॥ ೫ ॥

ಜತೆ ॥ ಬಿಡದೆ ಕಂಡೆನು ನಿನ್ನಯ ದಿವ್ಯ ಪಾದವ ಯೆನ್ನ । ಮುಂಡೆಯೊಳಗಿತ್ತು ಸಲಹೊ ನರಹರಿಕೃಷ್ಣಾ । ಕಂಡೆನು ನಿನ್ನಯ ದಿವ್ಯಪಾದವ ॥ ೬ ॥



## ೪೭. ಸುಳಾದಿ.

**ಧ್ರುವತಾಳ** ॥ ತನ್ನಾ ಶರಣರಾ ಜರದಡಂ । ಕರುಳಾಮಾಲೆಯ ಕಿತ್ತಾ ಉರಿಮಾರಿ ದೈವವೆಂದರಿಯಿರೆ । ತನ್ನಾ ಶರಣರಾ ಜರದಡಂ । ಚೈದ್ಯಾ ಜರದು ನುಡಿವಾ ಸಭೆಯಲ್ಲಿ ಶಿರವರಿದುದಾ । ಉರಿಮಾರಿ ದೈವವೆಂದರಿಯಿರೇ । ತನ್ನಾ ಶರಣರಾ ಜರದಡುಂ । ಪಿರಿದು ಲೋಕವಾ ಸಂಕರುಷಣನಾಗಿ ನುಂಗಲು । ಉರಿವಾ ದೈವವೆಂದರಿಯಿರೇ । ತನ್ನಾ ಶರಣರ ಜರದಡುಂ । ಉರಿಮಾರಿ ದೈವದೊಳುರಿಮಾರಿಯು ತಾ । ಕರುಣಾಳುಗಳೊಳಗಿ ಕರುಣಾಳು । ಮರೆಹೊಕ್ಕವರಾ ಕಾಲಕರ್ಮವ ಗೆಲುವರೇ । ವರದಕೇಶವನಾ ಅಂಘ್ರಿಯ ಸಾರಿ ಬದುಕಿರೋ । ತನ್ನಾ ಶರಣರ ಜರದಡುಂ ॥ ೧ ॥

**ಮಟ್ಟೆತಾಳ** ॥ ಹರಿಶರಣರಾ ಪೀಡಿಸಿ ಹರಿಮಹಿಮೆಯಾ । ಜರದು ನುಡಿವಾ ಹಿರಣ್ಯಕ ಚೈದ್ಯರುಗಳಾ । ಕರುಳಮಾಲೆಯ ಕಿತ್ತನೂ ಶಿರವರಿದನೂ । ಉರಿಮಾರಿ ದೈವವಲ್ಲವೆ । ಕೆಣಕಬಹುದೆ ಉರಿಮಾರಿ ದೈವವಲ್ಲವೆ । ಹರಿಶರಣರ ಕೇಳುಂಬಂ । ಹರಿಮಹಿಮೆಯ ಪಿರಿದುಂಬಂ । ಪರಗತಿಯಾನುಂಬೋ ವರದಕೇಶವರಾಯಾ । ಉರಿಮಾರಿ ದೈವವಲ್ಲವೆ ॥ ೨ ॥

**ರೂಪಕತಾಳ** ॥ ಆವಾ ದೈವದ ಆಶರಣಹೊಕ್ಕಡುಂ । ಮೇಣಾದ ಬಲ್ಲಿದಾನಲ್ಲದಿದ್ದಡುಂ । ಕಾವಡೆ ಕೊಲುವಡೆ ಸ್ವತಂತ್ರವುಂಟೇ । ಕಾವಾ ಕೊಲ್ಲುವ ನಮ್ಮ ವರದಕೇಶವರಾಯಾನಂಘ್ರಿಯ ದೃಢವಿಡಿದು ಬದುಕಲರಿಯಿರೋ । ಕಾವಡೆ ಕೊಲ್ಲುವಡೆ ಸ್ವತಂತ್ರವುಂಟೆ ॥ ೩ ॥

**ಅಟತಾಳ** ॥ ವೃತ್ತ್ಯ ಮಾರಿ ಮಸಣಿಗಳು ಕ್ಯಾದರೆಂದು । ತುತ್ತಾ ಭುಕುತಿಯಿತ್ತಾ ಕತ್ತೆ ಜೀವರು ಕೇಳಿ ಹೇತ್ರೈಯ್ಯಾ । ಕೊಲುವರೇ ಮತ್ತಾರು ಕಾವರು । ಪೃಥ್ವಿ ನುಂಗಲು ಇಳಿದು ತೆಗದರ್‍ಯ್ಯಾರು । ಹೇತ್ರೈಯ್ಯಾ ಕೊಲುವಡೆ ಮತ್ಯಾರು ಕಾವರು । ವತ್ತೊತ್ತಿದೊಷವನಿಳುಹುವಾ ಸಮ್ಮ ದೇವಾ । ಕರ್ತೃ ಶ್ರೀವರದಕೇಶವನಾ ಅಂಘ್ರಿಯ ಸಾರೋ । ಹೇತ್ರೈಯ್ಯಾ ಕೊಲುವಡೆ ಮತ್ತಾರು ಕಾವರೂ ॥ ೪ ॥

**ಏಕತಾಳ** ॥ ಹರಿಶರಣೆಂಬವನಾವನಾತನಾ ದುರಿತಕೋಟಿ ಹೋದವು । ಮರಳಿನ್ನೋಡವು ಗ್ರಹಭೂತಗಳು । ಮರಳಿನ್ನೋಡವು ವ್ರಣ ವ್ಯಾಧಿಗಳೂ । ಹರಿಹರಿ ಅಂತಕಗೆ ಕೂಡವಾ । ಮರಳಿನ್ನೋಡಾ ಗ್ರಹ ಭೂತಗಳೂ । ಮರಳಿನ್ನೋಡಾ ವ್ರಣವ್ಯಾಧಿಗಳೂ । ಪರಲೋಕಕ್ಕೆ ನೆಯಾದ ಸುಖಕ್ಕೆ ನಮೋ ನಮೋ । ವರದಕೇಶವಧಾಯಾ ಮರಳಿನ್ನೋಡವು ಗ್ರಹಭೂತಗಳೂ ॥ ೫ ॥

**ಜತೆ** ॥ ಸುತ್ತಿದ ಕಾಲಾಕರ್ಮವ ಗೆಲುವರೆ । ಕರ್ತೃ ಶ್ರೀವರದ ಕೇಶವನಾ ಅಂಘ್ರಿ ಸಾರೋ । ಸುತ್ತಿದ ಕಾಲಾಕರ್ಮವ ಗೆಲುವರೆ ॥ ೬ ॥

## ೪೮. ಸುಳಾದಿ.

ರಾಗ ಶಂಕರಾಭರಣ.

**ಧ್ರುವತಾಳ** ॥ ತಳಿರಂತೆ ಹೆಜ್ಜೆಹೆಜ್ಜೆಗೆ ಚರಣಾ । ತಳಿಗಳು ಥಳ ಥಳಿಸುವಾ ಚೆಳುಗುರು । ಶೆಳೆನಡು ಬಳುಕಲು ತೊಡೆಗೆ ಘಂಘಣಿಯೆಂಬಾ । ಉಡಿಘಂಟೆ ಕಟ್ಟಿಹ ಕಟಿಸೂತ್ರದುಕೂಲ । ನಳಿನಳಿಸುವಾ ತೋಳು ನಗೆ ಮೊಗದಾ ಬೆಂಬಳಗಾಗುತಾ । ಬರೂತ ಸುಳಿಗುರುಳರಳೆಲೆ ಮಾಗಾಯಗ ಳೊಳು ನಲಿವುತ್ತಾ । ಗೋಕುಲದಲ್ಲಿ ಸುಳಿವಾ ವರದಕೇಶವಾ ಗೋವಳ ಮಾರುತಿ ಉಡುಪಿಲಡಗಿದನಿವಕೋ ॥ ೧ ॥

**ಮಟ್ಟೆತಾಳ** ॥ ಬಡವರ ನಿಧಿಯೋ ಭಾಗವತರ ಭಾಗ್ಯವೋ । ಮಡದಿಯರುರುಲುಹೋ ಮಹಾಸತಿಯ ಸಂಭ್ರಮವೋ । ವಡಲವಿಡಿದು ಪ್ರತ್ಯಕ್ಷವೋ । ಲಾವಣ್ಯದ ತೊಡುವೋ ॥ ಆನಂದದ ಮಡುವೋ । ಮೋಹಾ ಸ್ಪೂಡವಿಗೆ ಪತಿ ವರದ । ಕೇಶವಮೂರುತಿ ಕಡಲಕಡಿಯುಲುಡುಪಿಲಡಗಿದೆ ನೋಡ್ಯೆ ॥ ೨ ॥

**ರೂಪಕತಾಳ** ॥ ಗಡಣಾದ ಗೋಪಾಲರನು ವಂಚಿಸಿ ಬೆಂ। ಬಿಡದೆ ಬಾಹಾ ಗೋಪಿಯರ ಮರೆಯಿಸಿ । ತಡವಿದ ತುರುವಿಂಡುಗಳ ತಪ್ಪಿಸಿ ॥ ತನ್ನ ವಟ್ಟು ಬಲಿದೇವನ ಬಿಟ್ಟು । ಪಡುಗಡಲಕಡಿಯುಲುಡುಪಿಲಡಗಿದರೆ ನಿನ್ನನು ಬಿಡೆ ಬಿಡೆ ವರದಕೇಶವ ಕೃಷ್ಣಾ ॥ ೩ ॥

**ಅಟತಾಳ** ॥ ಕಡವಾ ಮಂಥನವ ಪಿಡಿದು ಕೆನೆವಾಲನು ಕುಡಿವಾ। ಚಿಕ್ಕಮಕ್ಕಳ ಬಡಿವಾ । ಕಡು ಧೂರ್ತನು । ನಿನ್ನಾ ಮಗನೆಂದು ನಂದನಾ । ಮಡದಿಗೆಲ್ಲಾ ಸತಿಯರು ದೂರೇ ಆಕೆ ಕೊಲುವಳೆಂದು । ಉಡುಪಿನೊಳಡಗಿದರೆ ನಿನ್ನಾ ಪಿಡಿದಿರೆ ವರದಕೇಶವ ಕೃಷ್ಣಾ ॥ ಆಕೆ ಬಡಿವಳೆಂದೂ ॥ ೪ ॥

**ಏಕತಾಳ** ॥ ಮುಡಿಗೆ ಸುತ್ತಿದ ಕತ್ತರವಿಲಿ ಕೈಯಲಿ । ಪಿಡಿದ ನಾಬಲ ಗೋವಳಗೋಲೂ ಉಡಿಯ ಗೋಲಿಯ ಚೀಲಾ । ಉಡಿಯ ಗೋಲಿಯಚೀಲಾ । ಹೆಗಲಡಿಯ ಕಲ್ಲಿಯ ಕಂಬಳಿಯಾ । ಉಡ್ಡಿಯಗೋಲಿಯ ಚೀಲಾ । ನಡಿತಂದನು ತುರುಗಾವ ಲೀಲೆಯಿಂದಾ । ಉಡುಪಿನ ವರದ ಕೇಶವ ಕೃಷ್ಣಾ ॥ ೫ ॥

**ಜತೆ** ॥ ಬಿಡೆ ನಿನ್ನ ದಾಸ್ಯದ ಪರಮಪದವಿಯನೂ । ಬಿಡೆ ಬಿಡೆ ವರದಕೇಶವ ಕೃಷ್ಣಾ । ಬಿಡೆ ನಿನ್ನ ದಾಸ್ಯದ ಪರಮಪದವಿಯಾ ॥ ೬ ॥

## ೪೯. ಸುಳಾದಿ.

**ಧ್ರುವತಾಳ** ॥ ಭಯವೆಂಬಾ ಗಜಕೆ ಪಂಚಾನನ ಹರಿನಾಮ ಭಯವೆಂಬಾ ಗಿರಿಗೆ ಕುಲಿಶವಯ್ಯಾ । ದುರಿತವೆಂಬಡವಿಗೆ ದಾವಾನಲ ಹರಿ

ನಾಮಾ । ದುಃಖವೆಂಬಾ ಶರಧಿಗೆ ವಡಬಾನಲಾ । ಸಂಸಾರವೆಂಬಾ ನದಿಗೆ ಹರಿಗೋಲು ಹರಿನಾಮಾ। ಮಹಾಪಾತಕಕ್ಕೆ ಪ್ರಾಯಶ್ಚಿತ್ತವು ತಾನೂ । ಹರಿ ನಾಮ ಅಜಮಿಳ ನರಕಕೆ ಬಿಡದೆ । ವೈಕುಂಠಕ್ಕೊಯಿದಿತು ಜಗವರಿಯಲೂ। ಹರಿನಾಮ ಪ್ರಹಲ್ಲಾದನ ಪ್ರತಿಪಾಲಿಸಿದೆ । ಪಟ್ಟಗಟ್ಟಿಸಿದೆ ವಿಭೀಷಣಗೆ । ಹರಿನಾಮ ಪಾಂಚಾಲಿಯ ಅಭಿಮಾನವ ಕ್ಕಾಯ್ದೆ । ಯೋಗೀಂದ್ರವಿಠಲಾ ನಿನ್ನ ನಾಮ ವಜ್ರಪಂಜರ ಭಕತರಿಗೆ ಮುಕುತಿಯಾ ಸಾರೆ ಅಯ್ಯಾ । ಭವವೆಂಬಾ ॥ ೧ ॥

ಮಟ್ಟೆತಾಳ ॥ ಸಕಲ ನಿಧಿಗಳನ್ನೀವುದು ನಿನ್ನ ನಾಮವಯ್ಯಾ । ಅಂಜನೆಯ ತನಯ ಹನುಮನಿಗೆ ಅಂಜಬೇಡವೆಂದು । ವಜ್ರಪಂಜರವಾನಿತ್ತುದ ರಾಮ ನಿನ್ನ ನಾಮವಯ್ಯಾ । ಕಂಜನೇತ್ರ ನಿನ್ನ ನಾಮ ಯೋಗೀಂದ್ರವಿಠಲರಾಯಾ ॥ ೨ ॥

ರೂಪಕತಾಳ ॥ ನಾಮಾಮೃತವನೂ । ಪೆನಾಗಿನಾರುಚಿರುತರ ಬೇಡಾ । ಯೋಗೀಂದ್ರವಿಠಲನ ದಿವ್ಯನಾಮೌಷಧಿಯನೂ । ಸೇವಿಸಿ ಭವ ರೋಗ ಹಾರುವದು । ಆರೋಗ್ಯವಪ್ಪದಯ್ಯಾ । ಹಾಗ ಹತ್ತದು ಬೆಳೆ ಸವೆಯದೂ ॥ ೩ ॥

ಅಟತಾಳ ॥ ಅಂಜಲಿದೇಕೋ ವಜ್ರಪಂಜರ ಹರಿನಾಮವಿರಲು । ಕಾಮಿಸಲ್ಯಾಕೋ ಕಲ್ಪತರು ಸಾರಿದ ಬಳಿಕಾ । ಚಿಂತಿಸಲ್ಯಾಕೋ ಚಿಂತಾಮಣಿ ಕೈಸೇರಿದ ಬಳಿಕಾ । ಯೋಗೀಂದ್ರವಿಠಲನ ದಿವ್ಯನಾಮ ನಮಗೆ ನಾಲಿಗೆಯೊಳಿದ್ದ ಬಳಿಕಾ ಚಿಂತಿಸಲ್ಯಾಕೋ ॥ ೪ ॥

ಏಕತಾಳ ॥ ಕರಿಯುಂಜುವದಂಕುಶಕೆ । ಗಿರಿಯುಂಜುವದು ಕುಲಿಶಕಯ್ಯಾ । ಕುಮುದವಂಜುವದು ತರಣಿಗೆ । ಕಾನನವಂಜುವದಗ್ನಿಗೈಯ್ಯಾ । ಪಂಚಮಹ ಪಾತಕವಂಜುವದು ಅಯ್ಯಾ । ಯೋಗೀಂದ್ರವಿಠಲ ನಿನ್ನ ನಾಮಕ್ಕೈಯ್ಯಾ ॥ ೫ ॥

ಜತೆ ॥ ನಿನ್ನ ನಾಮಾಮೃತವನ್ನೆರದು ಯೆನ್ನ । ಧನ್ಯನಾ ಮಾಡು ಯೋಗೀಂದ್ರವಿಠಲರಾಯಾ ॥ ೬ ॥

## ೫೦. ಸುಳಾದಿ.

ರಾಗ ಶಂಕರಾಭರಣ.

**ಧ್ರುವತಾಳ** ॥ ಕಾಮ ಕಂಗೆಡಿಸುತಲಿದೆ। ಕ್ರೋಧ ಬಾಧಿಸುತಿದೆ। ಲೋಭ ಲಾಭವನ್ನರಿಯದಲಿದೆ । ಮೋಹ ಮುಂದುಗೆಡಿಸುತಿದೆ । ಮದ ಮುದವೂ ಬೀರುತಿದೆ। ಮತ್ಸರವೂ ತುಚ್ಛನನೂ ಮಾಡುತಿದೆ। ಯೇನವಾ ಕಲಿ ದೇವ ನಾನರಿದು ಬೇಡಿದರೆ। ನೀ ನಗುವೆ ನೇಮಿಸಲು ನೋಡಿ ನಗುವೆ ನೀನಾ ಕಾಮ । ಬಡವನಾ ಬಿಡಲುಬಾರದೆ । ದೂರುವೆನೂ ಸ್ವಾಮಿಯಾ ಪ್ರೊಡೆಯ । ಬಿಡಿಸಯ್ಯಾ ಹಗೆಗಳ ಕಾಟವಾ । ಕೊಡು ನಿನ್ನ ಭಕುತಿಸುಖ ವನೂ । ನಿನ್ನ ಭಕತಜನರೊಡನಾಡಿಸಿದಚಲಾನಂದವಿಠಲಾ ವಿಭುವೆ । ಕಾಮವೆಂಬಾ ॥ ೧ ॥

**ಮಟ್ಟಿತಾಳ** ॥ ಹೆಜ್ಜೆಹೆಜ್ಜೆಗೆ ಗೋವಿಂದ ಯೆಂದೆನದಾ। ಲಜ್ಜೆಗೆಟ್ಟ ಪಾಪಿಗೆ ನಿತ್ಯ ನರಕಾ। ಲಜ್ಜೆಯನಳಿದ ಮಾಹಾತ್ಮಗೆ ಹರಿಪಾ । ದಾಬ್ಜದ ಮಕರಂದವನು ಸೇವಿಪನೂ । ಸಜ್ಜನಪ್ರಿಯ ಅಚಲಾನಂದವಿಠಲಾ । ಅರ್ಜುನಗೊಲಿದಂತೆ ವೊಲಿವನು ಕಾಣಿರೋ ॥ ೨ ॥

**ರೂಪಕತಾಳ** ॥ ಆರಾರ ಮನೆಗಳಿಗೆ ಹಾರೈಸಿ ಹೋದರೆ। ಆರೆನ್ನ ನುಡಿಸ್ಯಾರು। ಇತ್ತಬಾರೆನ್ನಾ ನೀನೆತ್ತ ಸಾರುವೆ। ಹರಿಯೆ ಸುತ್ತ ಮುತ್ತಿತು। ಸಂಸಾರಾಬ್ಧಿಯುಲೂದರೆ ಯೆತ್ತ ಸಾರುವೆ ಹರಿಯೆ । ಕತ್ತಲೆಗಡ್ಡಿತು ಕಂಗಾಣದೆ ಮುಗುಧಾನೆ । ಇತ್ತಲೈದಾ ಅಚಲಾನಂದವಿಠಲಾ । ಯೆತ್ತ ಸಾರುವೆ ॥ ೩ ॥

**ಅಟತಾಳ** ॥ ನಿನ್ನ ಡಿಂಗರಿಗನೆಂದುರದಲುಂಡಿಗೆಯೊತ್ತಿ । ಇನ್ನು ಸಲಹದಿದ್ದರಾರು ಮೆಚ್ಚುವರಯ್ಯಾ । ಯೆನಗೆ ನಿನಗೆ ಆಚಾರ ವಿಚಾರ। ಇನ್ನು ನಿನ್ನ ಹಿಡಿದು ಬಿಡೆ ನೀ ಯಾರಿಗಾದರು ಹೇಳೂ । ಯೆನಗೆ ನಿನಗೆ ಆಚಾರ ವಿಚಾರ। ಯೆನ್ನ ಸಲಹದಿದ್ದರೆ ನಿನಗೆ ಭಕತರಾಣೆ। ಯಿನ್ನೊಡೆಯ ಕೇಳೂ ಅಚಲಾನಂದವಿಠಲಾ ॥ ೪ ॥

**ಏಕತಾಳ** ॥ ತಪ್ಪಿಲ್ಲದೆ ಅವಗುಣವಿಲ್ಲದೆ ಅಯ್ಯಾ ವೊಬ್ಬಾರನೊಬ್ಬರ ಮರೆಹೊಗುವರೆ ದೇವಾ । ಮರೆಹೊಕ್ಕವರ ಕಾವನಲ್ಲದೆ । ಅಲ್ಲಿ ಕುಲಾಚಾರ ವಸ್ತುಗುಣಾವಗುಣಗಣವನೂ । ಮರೆಹೊಕ್ಕವರಲಿ ಅರಸುವರೇ ॥ ದುರಾಚಾರಿಯಾಗಿ ದುಃಖಭೀತನಾಗಿ ಮರೆಹೊಕ್ಕೆ ಕಾಯೋ ಅಚಲಾನಂದ ವಿಠಲಾ । ಮರೆಹೊಕ್ಕವರಲಿ ॥ ೫ ॥

**ಜತೆ** ॥ ...........................................................................................................................................



## ೫೧. ಸುಳಾದಿ.



ರಾಗ ಧನ್ಯಾಸಿ.

**ಧ್ರುವತಾಳ** ॥ ಸುರನದಿಯ ಪಡದಾ ಚರಣಾಂಬುರುಹ ಪದಾ । ದಾನವರೇನುಬಲ್ಲರಾ ಯೆರಡು ಪದದಾ । ಬಿರುದಿನ ಮಿಡ್ಡೆಯುವ ವಿರೂಪಿನ ಪೆಂಡೆಯುದ ಚೆಲುವಾ । ಸುರಚರ ಮುಕ್ಕದಳೀವ ಭವಪಂಭವಿತ ಉರುಗಳಾ । ಪೀತಾಂಬರದಿಂದೆಸವಾ । ಉರುನಿತಂಬಿಗಳ ಶಿರಿಯ ಪಿರೂರದ ಹಾರ ತ್ರಿಸರದಿಂದೊಪ್ಪುವ ಕಂಧರದಾ । ಸರಸಿಜನಯನಂಗಳೂ । ದಿನಕರಕಿರಣವ ಸುಳಿವಾ । ಮುಕುಟವಾ ನಿಂದಿರಿಸಿನ್ನಾ ಕರುಣಾಕರ ವೈಕುಂಠ ವೆಂಕಟಗಿರಿರಮಣಾ । ಸುರನದಿಯ ॥ ೧ ॥

**ಮಟ್ಟಿತಾಳ** ॥ ನಿನ್ನ ನಾಮಧಾರಿಯಾಗಿ ನಿನ್ನ ಚಿಹ್ನವನ್ನೂ ಧರಿಸಿ । ನಿನ್ನ ಹೊನ್ನಾ ಹರಿವಾಣದಾ ಪ್ರಸಾದವನ್ನುಂಡು ದಾಸನಾದೆ ನಾ । ಇನ್ನುದಾಸೀನವಮಾಡಸಲ್ಲಾ । ರಾಘವ ವೈಕುಂಠ ವೆಂಕಟೇಶಾ ॥ ೨ ॥

**ರೂಪಕತಾಳ** ॥ ನಿನ್ನ ಬೆಳ್ಪುಡಿ ಬಾಯಿದಂಬಲದ ಕಾಳಾಂಜಿಯೆನ್ನಾದು ಯೆನ್ನದು । ನಿನ್ನ ಶಿರಿಮುಡಿಗೆ ಮುಡಿಸಿದಾ ಘನ್ನಚಂಪಕ ಜಾಜಿಕುಸುಮ ಪ್ರಸಾದವು । ಯೆನ್ನದು ಯೆನ್ನದು ಘನ್ನ ವೈಕುಂಠಗಿರಿರಮಣಾ ॥ ೩ ॥

**ಅಟತಾಳ** ॥ ಒಡೆಯ ನೀನಡಿಯಿಡೆ ಹೊನ್ನಹಾವಿಗೆಯ ತಂದಿ ಡುವಾ ಸೇವೆಯೆನ್ನದು ಯೆನ್ನದು। ಒಡೆಯಾ ನೀ ನಡೆನಡೆ ಪಾದ ಪರಾಕು ಸ್ವಾಮಿ ಜಯ ಯೆಂದು । ಘಡಿಸುವಾ ಊಳಿಗ ಮುನ್ನವೆ ಯೆನ್ನದು ಯೆನ್ನದು। ಒಡೆಯ ಬಿಡೆನು ವೈಕುಂಠ ವೆಂಕಟಾಚಲ ಒಡೆಯ ದೇವೇಶಾ ಮೆಲ್ಲಡಿದಾವರೆ ಮೆಟ್ಟಿ ನಡೆ ಯೆನ್ನದು ಯೆನ್ನದು ॥ ೪ ॥

**ಏಕತಾಳ** ॥ ಮನಕೆ ನಿನ್ನಯ ನೆನವುದೆ ಜೀವನಾ । ತನುವಿಗೆ ನಿನ್ನಡಿಗೆರಗಿಸಿ ಪುಳಕಿತವ ಸಂದಿಸುವುದೇ ಜೀವನಾ। ಇನಿತು ಭುವನದಲ್ಲಿ ಧನ್ಯವಾ ನಾನರಿಯೇನೂ । ವೈಕುಂಠ ವೆಂಕಟಗಿರಿರಮಣಾ । ಮನಕೆ ನಿನ್ನಯ ನೆನವುದೇ ಜೀವನಾ ॥ ೫ ॥

**ಜತೆ** ॥ ಕರುಣಿಸಯ್ಯಾ ಯೆನಗಿನಿತನೆ ಕರುಣಾಕರ ವೈಕುಂಠ ವೆಂಕಟೇಶಾ ನಿನ್ನ । ಚರಣದ ಸೇವೆಯನ್ನೂ ಕರುಣಿಸಯ್ಯಾ ಯೆನಗಿನಿತನೆ ॥ ೬ ॥ ಶ್ರೀಃ ॥



## ೫೨. ಸುಳಾದಿ.

ರಾಗ ಕಾಂಬೋಧಿ.

**ಧ್ರುವತಾಳ** ॥ ನೋಡೆಲೆ ಮನವೇ ಜಗದೇಕ ಲಾವಣ್ಯನಿಧಿಯ ನನುದಿನಾ। ಬೇಡು ಬೇಡು ತನ್ನೊಡಲವಿವದಾನಿಗಳರಸನಾ । ಕೊಡೆಲೊ ಮನವೇ ಸುಖನಿಧಿಯಾ ಅಜಭವೇಂದ್ರಾದಿ ಸುರೇಶರಾ। ಕೇಡಿಲ್ಲಾ ತನ್ನಿಜ ಪದವನೊಲುವರೇ ನೀನು । ಆಡಾತನ ದಾಸರೊಡನೆ ದುರಿತಕೋಟಿಗಳಿರಾವು। ರೂಢಿಗಧಿಕ ದಕ್ಷಿಣವಾರಾಣಸಿಯೆನಿಪಾ ಪುರದಲ್ಲಿ। ಅಡಿದ ಭಕತ ಜನರಿಂದೊಲಿದು ಕರುಣದಲಿ। ಗಾಡಿಗಾರ ಚನ್ನಕೇಶವನಾ ನೀ ವೈಕುಂಠ ವಲ್ಲಭನಾ। ನೋಡೆಲೆ ಮನವೆ ॥ ೧ ॥

**ಮಟ್ಟೆತಾಳ** ॥ ಮೆರವ ಮುಕುಟ ಮುತ್ತಿನ ಮೂಗುತಿ ಕರ್ಣದಲಿ। ನಿರುಪಮ ರತ್ನದೋಲೆ ರಾಜಿಪಾ ವದನದಾ। ಕರಚತುಷ್ಟಯದಲಿ ಶಂಖ

ಗದೆಯಾ । ಸರಸಿಜಾಂಘ್ರಿ ಪೀತಾಂಬರದ ಶ್ರೀವೈಕುಂಠವಲ್ಲಭ ವೇಲಾ ಧಿಪ । ಕರುಣಾಕರ ಚೆನ್ನಕೇಶವ ನಿನ್ನ ಮೂರುತಿಗೆ ನಮೋ ॥ ೨ ॥

**ರೂಪಕತಾಳ** ॥ ಕಮಲಜ ಪೂಜಿತಾಂಘ್ರಿಕಮಲವಾ । ಕಮ ಕುಚಕುಂಕುಮಾಂಕಿತ ಪಾದಾಂಬುಜವಾ । ಅಮರನದಿಯ ಪಡದ ರಣಕಂಜವಾ । ಅಮಿತಮಹಿಮ ಯೆನ್ನ ದೇವನೇ ಪೊಳಗಿರಿಸಯ್ಯಾ । ್ಯಮಣಿಶತಕೋಟಿತೇಜ ವೈಕುಂಠವಲ್ಲಭ ನಮೋ ವೇಲಾಪುರೀಶ ಚೆನ್ನ ಶವಾ । ಅಮರನದಿಯ ಪಡದ ಚರಣಾ ॥ ೩ ॥

**ಝುಂಪೆತಾಳ** ॥ ನಿನ್ನ ಕೀರುತಿ ಕಿವಿಗೆ ಸಾವಾ ನಾಲಿಗೆಯ ಚಾರು ಾವಣ್ಯಾ । ಯೆನ್ನ ಕಣ್ಣಿಗೆ ಆಧಾರವಯ್ಯಾ ವೇಲಾಪುರದ ಚೆನ್ನಕೇಶವ ವೈಕುಂಠರಮಣಾ । ಯೆನ್ನ ಕಣ್ಣಿಗೆ ॥ ೪ ॥

**ತ್ರಿಪುಟತಾಳ** ॥ ಭುವನಪತಿತಾನೆತ್ತಾ ನಿನ್ನ ಮಹಿಮೆಗಳೆತ್ತಾ । ಶ್ರೀಹರಿಯೇ ಶ್ರುತಿತತಿಗಗೋಚರವಯ್ಯಾ ॥ ನಿನ್ನ ಮಹಿಮೆಗಳು ಉನ್ನತ ವೈಕುಂಠವಲ್ಲಭ । ಚನ್ನ ಕೇಶವಾ ಶ್ರೀಪತಿಯೇ ನಿನ್ನ ಮಹಿಮೆಗಳು ॥ ೫ ॥

**ಅಟತಾಳ** ॥ ಸರಸಿಜೋದ್ಭವ ಶೂಲಿಸುರಪ್ರಮುಖ ಸುರಾಸುರಾದಿ ಶರನಿಧಿಮಥನದಲ್ಲಿ ನೆರದಿರಲೂ । ಪರಮಪುರುಷಾ ಪುರುಷೋತ್ತಮಾ ಮಲೆ ಯ ಚೆನ್ನಿಗರಾಯನೆಂಬಾ ಪೆಸರು ಸಲಹುದಯ್ಯಾ । ತಿರಿವೈಕುಂಠವಲ್ಲಭ ವೇಲಾಪುರಾಧಿಪ ಚೆನ್ನಕೇಶವಾ । ಪರಮಪುರುಷಾ ಪುರುಷೋತ್ತಮಾ ॥ ೬ ॥

**ಏಕತಾಳ** ॥ ಶರಣಾಗತ ಪ್ರತಿಪಾಲಕನೆಂಬಾ ಬಿರಿದನು ಕೇಳಿ । ಶರಣುಹೊಕ್ಕೆನೂ ಯೆನ್ನವಗುಣವನೂ ವರಸದೆ ನಿನ್ನ ನಿಜ । ಕರುಣವನು ನೆರೆಯಾ ಚೆನ್ನಕೇಶವ ಅನುಪಮಗುಣನಿಧಿ ಆನಂದ ಮೂರುತಿ ವೇಲಾ । ಪುರದ ಶ್ರೀವೈಕುಂಠರಮಣ ಯೆನ್ನವಗುಣ ವರಸದೆ ॥ ೭ ॥

**ಜತೆ** ॥ ಮೂರುಲೋಕ ಮೂರುತಿ ಮೂರುಲೋಕ ಮೋಹನ । ಮೂರುಲೋಕದೊಡೆಯನೆ ಮೂರುಲೋಕ ವಂದಿತ ಚೆನ್ನಕೇಶವ ವೈಕುಂಠ ರಮಣಾ ॥ ೮ ॥ ಶ್ರೀಃ ॥

## ೫೩. ಸುಳಾದಿ.

ರಾಗ ಕಾನಡಾ.

**ಧ್ರುವತಾಳ** ॥ ಯೆಲ್ಲಿಯ ಮಧುರಾಪುರ ಇನ್ನೆಲ್ಲಿಯ ಕಂಸಾಸುರನೆ। ಯೆಲ್ಲಿಯಿಂದ ಬಂದುದೆ ಬಿಲ್ಲಹಬ್ಬ ತಾ । ವೆಲ್ಲಿಯ ಅಕ್ರೂರನಿವ ಕಾಂ ಯೆಲ್ಲಿಂದ ಬಂದನೆ । ಇಲ್ಲಿ ನಮ್ಮ ಗೋವಿಂದನೊಡಗೊಂಡ್ಯೊದನೆ । ಯೆಲ್ಲಿಯು ಮನೆ ನಮಗಿ । ನ್ನೆಲ್ಲಿಯು ಮನೆ ವಾರುತೆ ಆ ಹನ್ನೆರಡು ಉಲಿ ಕೇಳದೀಯೆಲ್ಲಿಯಾ । ನಿಲ್ಲಲರಿಯಾವೆ ನಿಮಿಷವಗಲಿ। ವಲ್ಲಭನ್ನ ಶಿರಿಚರಣಾ ವವಿಂದವಾ । ಯೆಲ್ಲಿ ನಮ್ಮ ವೈಕುಂಠವಿಠಲ ಹೋದಡಲ್ಲಿಗೆ ಹೋಹಾ। ಆ ಹನ್ನೆರಡು ನಡೆ ಕೇಳದಿ ಉಲ್ಲಿಯಾ ॥ ೧ ॥

**ಮಟ್ಟೆತಾಳ** ॥ ಈತಗೆಲ್ಲ ದೂರಕಿತ್ತ ಮಾತಿನ ಅಕ್ರೂರತನವೆನ ಕೆಳದಿ । ಭೂತಳಕ್ಕೆ ಪೆಸರೆನಿಸಿದಕ್ರೂರಗೆ । ಈತಗೆಲ್ಲ ಯಾತಕ್ಕೆ ವೈಕುಂಠ ವಿಠಲನ ಅಗಲಿಸುವಗೆ । ಮಾತಿನ ಅಕ್ರೂರತನ । ೨ ।

**ರೂಪಕತಾಳ** ॥ ಬಿಲ್ಲಹಬ್ಬ ಮಧುರಾಪುರಾ । ಯೆಲ್ಲಿ ನಮಗೆ ಕೃಷ್ಣಯ್ಯಾ । ಬಿಲ್ಲಹಬ್ಬ ಸ್ಮರಗೆವ್ಮಾ ಗೊಲ್ಲರ ವಾಳ್ಯೆಯುಲನುದಿನಾ । ಬಿಲ್ಲ ಹಬ್ಬಾ ॥ ವಲ್ಲಭ ವೈಕುಂಠವಿಠಲ ನಿನ್ನ ಕರುಣದಿಂದಾ ॥ ೩ ॥

**ಝುಂಪೆತಾಳ** ॥ ಚರಣಸರಸಿಜವ ನಮ್ಮ ಶಿರದ ಮೇಲಿಡು ಕೃಷ್ಣಾ। ಮರಳಿ ನಮ್ಮ ಗೋಕುಲಕ್ಕೆ ಬಹೆನೆಂದು । ಮರಳೀ ॥ ಪರಮಪೂರುಷ ವೈಕುಂಠವಿಠಲಾ । ಮರಳಿ ॥ ೪ ॥

**ತ್ರಿಪುಟೆತಾಳ** ॥ ಮೂರುತಿಯು ಮನದಲ್ಲಿ ನಿನ್ನಾ । ಕೀರುತಿಯಾ ಕಿವಿಯಲ್ಲಿರಿಸೂ । ಮಾರಮಣನೆ। ಅನ್ಯವಿಚಾರವನುಳಿವಂತೆ ಮಾಡು । ಮಾರಮಣನೆ। ವಾರಿಜಾಕ್ಷ ವೈಕುಂಠವಿಠಲ ಕರುಣಾಕರನೆ । ಮಾರಮಣನೇ ॥ ೫ ॥

**ಅಟತಾಳ** ॥ ಹರಿಕರುಣಾಮೃತಾಂಬುಧಿಯ ಲೋಲಾಡಿ । ಮರಳಿ ವಿಯೋಗ ದುಃಖದಿ ಮುಳುಗಾಡಿ । ಪರಮಪೂರುಷ ವೈಕುಂಠವಿಠಲಾ । ಹರಿಕರುಣಾಂಬುಧಿ ॥ ೬ ॥

**ಏಕತಾಳ** ॥ ವರವಿರಹದಿ ಬೆಚ್ಚಂತಾರಂಗದಿ । ಸ್ಮರನು ಅಂಬಿಗೊಡ್ಡಿದ ಬೈರಂಗದಿ । ತರುಣಿಜನರೆಲ್ಲಾ ಹಂವಿರಹದಿ ವಿಕಳರಾಗಿ ತಿರುಗಲು ಕರುಣಿ । ಪರಮಪೂರುಷ ವೈಕುಂಠವಿಠಲ । ಕರುಣಾಕರ ಚೆನ್ನಕೇಶವಾ । ತರುಣಿ ಜನರೆಲ್ಲಾ ॥ ೭ ॥

**ಜತೆ** ॥ ಗೋಕುಲದಲಿ ಗೋಪಾಂಗನೆಯರೆಲ್ಲಾ । ಲೋಕೇಶ ವೈಕುಂಠವಿಠಲನಾ ನೆನದಾರು । ಗೋಕುಲದಲ್ಲಿ ॥ ೮ ॥ ಶ್ರೀ ॥



## ೫೪. ಸುಳಾದಿ.

**ಧ್ರುವತಾಳ** ॥ ಲಕ್ಷುಮಿಯ ಮಸ್ತಕಕೆ ಮಣಿಮೌಳಿಯಾದಾ । ಲಕ್ಷುಮಿಯಾನಂದಾಬ್ಧಿಗೆ ಪೂರ್ಣಚಂದ್ರನಾದಾ । ಲಕ್ಷುಮಿಯು ಉರಕೆ ಮಾಣಿಕ್ಯಾಪದಕವಾದಾ । ಲಕ್ಷುಮಿಯು ಭುಜಕೆ ಭುಜಕೀರ್ತಿಯಾದಾ । ಲಕ್ಷುಮಿಯಾ ಶ್ರಮಹಾರ ರಮ್ಯವಾದಾ । ನಿನ್ನ ಪಾದಾ ಸರಸಿಜ ಯೆನ್ನ ಮಸ್ತಕವಾಲಂಕರಿಸು । ವೈಕುಂಠವಿಠಲ ದಯಾನಿಧಿ ॥ ೧ ॥

**ಮಟ್ಟೆತಾಳ** ॥ ಅಜನಿಗೊಲಿದುಗೆ ಹಾರಾವಾದಾ । ಭವನಿಗೊಲಿದು ಸಾಲಿಗ್ರಾಮ ದೇವರಾದಾ । ಯಜುಸಾಮಾ ಮುಖ್ಯ ನಿಗಮಾಮಣಿ ಮೌಳಿಯಾದಾ । ಭಜಕ ದಿವಿಜನಿಕರಕೆ ಪರಬ್ರಹ್ಮನಾದಾ । ತ್ರಿಜಗವಂದ್ಯಾ ಪದವಾ ವೈಕುಂಠ ನಿಜ ಕರುಣದಿಂದೆನ್ನಾ । ಮಸ್ತಕದಾ ಮೇಲೊಮ್ಮೆ ದಯಮಾಡು । ಯಜುಸಾಮಾ ಮುಖ್ಯ ನಿಗಮ ಮೌಳಿಯಾದಾ ॥ ೨ ॥

**ರೂಪಕತಾಳ** ॥ ಮುನಿಹೃದಯಕ್ಕೆ ವರಜ್ಯೋತಿಯಾತನು ಸೊಬಗಿನ ಪೂಜ್ಯ ತಾನನುದಿನಾ । ಸನಕಾದಿಗಳಾಡುತಾ ಪಾಡುತಾ । ನೆನೆವಾ ಪರಮ ಕರುಣಮೂರ್ತಿಯಾ । ಸನಕಾದಿಗಳಾಡುತಾ ಪಾಡುತಾ । ಘನಪದವ ವೈಕುಂಠವಿಠಲರಾಯಾ । ಮನ ಶರನಿಧಿಗೆ ಸರಸಿಜವ ಇಡು । ಸನಕಾದಿಗಳಾಡುತಾ ಪಾಡುತಾ ॥ ೩ ॥

**ಝಂಪೆತಾಳ** ॥ ದುರಿತ ತಿಮಿರವಡಗದು ಮನಸರಸಿಜವರಳದು । ಹರಿಯ ಅರುಣಕಿರಣ ಭರಿತ ಚರಣಾ । ಸರಸಿಜಸಖನುದಯಿಸದಿರೆ । ಪರಮ ದಯಾನಿಧಿ ಶ್ರೀವೈಕುಂಠವಿಠಲ ಬಿನ್ನಪವಿದು । ಅರುಣಕಿರಣ ಭರಿತ ಚರಣಾ ॥ ೪ ॥

**ತ್ರಿಪುಟತಾಳ** ॥ ಪಾದಾಂಬುಜ ಮಧುಕರ ಭೂಮಿಯಂತೆ । ವಾಮಪಾದಾಂಬುಜ ಕನ್ನಿಕೆ ಆಕಾಶವಂತೆ । ಪಾದಾಂಬುಜ ಮಧುರಸ ಬಿಂದುವಂತೆ । ಶಿವನು ಶಿರದಿ ಧರಿಸಿದ ಗಂಗೆಯಂತೆ । ಆದಿದೇವ ಶ್ರೀವೈಕುಂಠ ವಿಠಲರಾಯಾ । ನಿನ್ನ ಪಾದಾಸರಸಿಜ ಅನಂತಮಹಿಮೆಯಂತೆ ॥ ೫ ॥

**ಅಟತಾಳ** ॥ ಕಡಬಿದ ಮರವದರಿ ಕಾಳಿಂದಿಯುಮಡುವಿಲಿ ಧುಮುಕ್ಕಿ । ಕಾಳಿಂಗನಾ ಶಿರದೊಳು ಧುಡುಂ ಧುಡುಮ್ಮೆನೆ ವಿಷಜಲ ಕಡಿಗಳಾ । ಕಡುಮ್ಮದು ಪದವಾ ವೈಕುಂಠವಿಠಲರಾಯಾ । ಇಡು ಯೆನ್ನ ಕ್ರೋಧಾಹೀಯಾ ಮದವಾಳಿಯಲಿ । ಧುಡುಂ ಧುಡುಂ ॥ ೬ ॥

**ಏಕತಾಳ** ॥ ಕೊಂಬು ತಿತ್ತಿರಿ ಕೊಳಲು ಪೌಂಗಳಾ । ಸಂಭ್ರಮದಿಂದ ಗೋಪಾಲರು ನಲಿದು । ಭುಂ ಭುಂ ಭುಂ ಭುಂ ತುತ್ತುರುತುರುತುರೆನ್ನೆ ಸುರ । ರಂಬರದಲಿ ದುಂದುಭಿ ಮೊಳಗೆ । ಅಂಬುಜಲೋಚನಾ ಕುಣಿದಾಡಿದಾ । ಭುಂ ಭುಂ ಭುಂ ಭುಂ ತುತ್ತುರುತುರೆನೆ । ಕಂಬುಕಂಠ ವೈಕುಂಠವಿಠಲಾ । ನೀನಿಂಬಾಗೆನ್ನಾ ಹೃದಯಮಧ್ಯದಲಿರೂ । ಭುಂ ಭುಂ ಭುಂ ಭುಂ ತುತ್ತುರುತುರೆನೆ ॥ ೭ ॥

**ಜತೆ** ॥ ದೇವದೇವಾ ಜಗಂಗಳ ಕಾವಾ । ಶ್ರೀವೈಕುಂಠೇಶ ಸಲಿಸು ಬಿನ್ನಪವಾ ॥ ೮ ॥ ಶ್ರೀಃ ॥

## ೫೫. ಸುಳಾದಿ.

ರಾಗ ದೇಶಿ.

**ಧ್ರುವತಾಳ** ॥ ಜಾನಕಿಯರಮಣಾ ರಾಮಗೆ ಜನನ ಉಂಟೆಂದು । ಹೀನಮತಿಯಲಿ ಖಳರು ತಿಳುಹುತಿಹರೂ । ಕಾನನದೊಳಗೆ ಚರಿಸುತ್ತಲಿ

ತನ್ನ । ಮಾನಿನಿಯ ಕಾಣದೆ ಅತಿದುಃಖಿಸಿದನೆಂದೆಂಬರೂ । ತಿಳಿದು ಹೀನ ಬಲದಲಿ ವಾಲಿಯನು ಕಾಣದತಿಬೇಗ । ಬಾಣದಿಂದಲಿ ಕೊಂದನೆಂಬರೂ । ಧಿಟ್ಟ ಮಾನವರ ಕೊಲೂವರಿ ಬೇಗದಿಂದಾ । ವಾನರರ ಸಖನಾದನೆಂದೆಂಬರೂ । ನಿತ್ಯ ಜ್ಞಾನಾದಿಬಲಮೂರುತಿ ವರದರಾಜ ರಾಮ ತಾ । ಮಾನವರೊಳಗೆ ಮನುಜನಂತಿರ್ದನೆಂಬುದಕ್ಕೆ । ಜಾನಕಿಯ ರಮಣಾ ॥ ೧ ॥

**ಮಟ್ಟೆತಾಳ** ॥ ಶಿಶುತನದಲ್ಲಿ ಮುನಿಯ ಯಾಗವ ಸಲಹುವೆನೆಂದು । ವಸುಧೆಯೊಳಗೆ ಅಸುರರ ಬಲಿವಾನೊರಸಲಿಲ್ಲವೆ ಕಾಣಿರೋ । ಪಶುಪತಿ ಧನುವನು ಕರಕಮಲದಿ ಪಿಡಿವುತ್ತಲಿ । ನಸುನಗುತಾ ಧನುವಾ ಮುರಿದು ಬಿಸುಡಲಿಲ್ಲವೆ ಕಾಣಿರೋ । ಪಶುಪತಿ ಕುಸುಮಶರನ ಪಿತಚಿದಾನಂದೋತ್ತುಮಮೂರುತಿ । ದಶರಥನಿಂದ ಜನಿಸಿದನಂತೆ ವರದರಾಜ ರಾಮಾ ॥ ೨ ॥

**ರೂಪಕತಾಳ** ॥ ಆವನದಂಗುಷ್ಟ ಚಿಮ್ಮಿಸಲಸುರತನು । ಭುವಳಿಯನೂ ತಿಳಿ ಖಳರ ಸಂಹರಿಸಿತ್ತು । ಆವನದೊಂದಂಬು ತಾಳೀಳ ಕೆಡಹಿತ್ತು । ಆವನ ಕಣ್ಣು ಕೆಂಪು ಶರಧಿಯನಿಂಟಿತ್ತು । ಆವನದೊಂದಂಬೂ । ಆವನ ಪೂರ್ಬಿಯಿಂದ ಭೂಭಾರವಿಳುಹಿತ್ತು । ಶ್ರೀವರದರಾಜ ರಾಮನ್ನಿದಿರುಂಟೆ ಜಗದೊಳು ॥ ಆವನದೊಂದಂಬೂ ॥ ೩ ॥

**ಅಟತಾಳ** ॥ ಅಸುರಸುತನು ಕಪಿಕಟಕವನಜ್ಞಾನ । ವಶಕೆ ಸಿಕ್ಕಿಸಿ ವಾನರರಾಜ ಮೊದಲಾಗಿ । ಉಸುರುಬಿಡುವದಿಲ್ಲಾ । ವಿಸುಕಲರಿತುದಿಲ್ಲ । ಶಶಿನೆ ಪೊಮ್ಮೆಯಾದರೆ ನಡೆನುಡಿವರೆ । ಉಸುರುಬಿಡುವದಿಲ್ಲಾ । ಅಸಮ ವರದರಾಜ ರಾಮ ಶರವಿಡೆ ಭರ । ವಸದಲ್ಲಿ ತರುಗಿರಿಗಳ ಪಿಡಿದರು ನೋಡು । ಉಸುರುಬಿಡುವದಿಲ್ಲಾ ॥ ೪ ॥

**ಏಕತಾಳ** ॥ ರಾಮನಾಳು ಹನುಮನು ಶರಧಿಯ ಲಂಘಿಸಿದ । ಭೂಮಿಸುತೆಯ ರೂಪಿಂಗೆ ರಾಮನ ಮುದ್ರಿಕೆಯನಿತ್ತೂ । ಕಾಮಚಾರಿಯಾದ ರಾವಣನ ವನವನು ಕಿತ್ತೂ । ತಾಮಸಖಿಲ ಸೂತರನ ಸಂಯಮ ಪುರಕಿತ್ತಾ । ಕಾಮಚಾರಿಯಾದಾ । ರಾಮನಾಳು ತನ್ನರಿಯಲ್ಲಿ ಲಂಕೆಯ

ನುರುಹೀದಾ । ರಾಮನಾಳು ಕ್ಷಣಕ್ಕೆ ಸಂಜೀವನಗಿರಿಯ ತಂದಾ । ರಾವನ ಕಟಕವಾ ಸಲಹೀ ಮರಳೀಡಾಡಿದಾ । ರಾಮ ವರದರಾಜನ ಮಹಿಮೆಯಿನ್ನೆಂತು ಉಂಟೋ ॥ ರಾಮನಾಳು ॥ ೫ ॥

**ಜತೆ** ॥ ದಶಮುಖಗಳನರಿವುತ್ತಲಿ ವರದರಾಜ । ದ ಶರಥರಾಮ ತ್ರಿದಶರಿಗೆ ಸುಖವಿತ್ತಾ ॥ ೬ ॥ ಶ್ರೀಃ ॥

## ೫೬. ಸುಳಾದಿ.

ರಾಗ ಆಹೇರಿ.

**ಧ್ರುವತಾಳ** ॥ ಶ್ರೀರಘುರಾಮಾ ಯೆಂದಾರಾದರು ನೆನದರೆ । ಘೋರಪಾತಕಹತ್ತುರಿರವು ಕಾಣಿರೋ ॥ ಶ್ರೀರಾಮಾ । ಒಂದುಬಾರಿಲಿ ಗಿರಿಯೆತ್ತಿ ಅಂದು ಗೋಕುಲವಾ ಕ್ಯಾದೆ । ಇಂದು ವೆಂಕಟಗಿರಿಯಲಿ ನಿಂದು ವೈಕುಂಠವಿದೆಂದು ತೋರುವ ಹಸ್ತಾದಂಡದಿ ನೋಡಿರೆಲ್ಲಾ । ಯೆಂದೇಬಿಗೂ ನಮ್ಮ ವರದರಾಜ ವೆಂಕಟೇಶಾ ಶ್ರೀರಘುರಾಮಾ ॥ ೧ ॥

**ಮಟ್ಟೆತಾಳ** ॥ ತುಂಬುರ ನಾರದಾ ಗೀತವ ಸಡಗರದಿಂ ಸಲಿದು ಪಾಡೆ। ಧಂ ಧಂ ಧಂ ಧಿಮಿಕ್ಕೆಂದು ನಂದಿ ಮದ್ದಳೆಯ ನಾದಿಸೆ ರಂಭೆ ನಾಟ್ಯವನಾಡಲೂ । ಅಂಬುಜನಾಭನನೋಲಗ ತುಂಬಿತು । ವರದರಾಜ ವೆಂಕಟೇಶಾ ಧಂ ಧಂ ಧಂ ಧಿಮಿಕ್ಕೆಂದು ॥ ೨ ॥

**ರೂಪಕತಾಳ** ॥ ವಾರಿಧಿಯ ಕಟ್ಟಬಲ್ಲವರುಂಟೆ । ರಾವಣನ ಕೊಲ್ಲುವರುಂಟೆ । ಬೇರೆ ಈರೇಳು ಜಗವಾನಾಳ್ದವರುಂಟೇ । ನಮ್ಮ ವರದರಾಜ ವೆಂಕಟೇಶನಲ್ಲದೆ ಪ್ರತಿಯುಂಟೇ । ಈರೇಳುಲೋಕವನಾಳ್ದವರುಂಟೇ ॥ ೩ ॥

**ಝಂಪೆತಾಳ** ॥ ಶಕಟಾಸುರನ ಉಂಗುಷ್ಠದಿ ಒದ್ದ ಪಾದಾ । ಸುಪ್ರಕಟ ಅಹಲ್ಯಾ ಶಾಪವಿಮೋಚನ ಪಾದಾ । ವಿಕಟದಿಂದೊಲಿದು ಬಲಿಯ ಬಂಧಿಸಿದ ಪಾದಾ । ಬ್ರಹ್ಮಾಂಡ ಕಟಕವಡದಾ ನಮ್ಮ ವರದರಾಜಾ ವೆಂಕಟೇಶಾ ವಿಕಟದಿಂದೊಲಿದು ॥ ೪ ॥

**ತ್ರಿಪುಟತಾಳ** ॥ ಈ ಪದಾ ಐದಲಿದು ಚತುರ್ವಿಧ ಪುರುಷಾರ್ಥ ಸ್ತುತಿಸಿ ನೀನೆ ಗತಿಯೆನಲೂ ಕಾವಾ । ಪತಿಯೈವರಿರಲು ದ್ರೌಪದಿಯಾದ ರದಿ ಕ್ಯಾದಾ । ವರದರಾಜ ವೇಂಕಟೇಶಾ ಪತಿಯೈವರಿರಲೂ ॥ ೫ ॥

**ಅಟತಾಳ** ॥ ಭಜಿಸುವಾ ಬನ್ನಿರೆಲ್ಲಾ ಗಜರಾಜವರದನಾ । ಅಜ ಮಿಳಗೆ ಮುಕ್ತಿಪದವಿತ್ತಾ ಹರಿಯಾ । ಭುಜಗರಾಜನ ಪೆಡೆಯಲಿ ನಲಿದಾ ಡುವ । ನಿಜಮೂರುತಿ ನಮ್ಮ ವರದರಾಜ ವೆಂಕಟೇಶಾ । ಭಜಿಸುವಾ ಬನ್ನಿರೆಲ್ಲಾ ॥ ೬ ॥

**ಏಕತಾಳ** ॥ ತ್ರಿಜಗದಲ್ಲಿ ದೇವರದೇವನೆಂದೆನಿಸಿಯೆ । ನಿಜಮೂಡ ಲಾದ್ರಿಯೊಳ್ನೆಲಸಿಹನಾ । ಭಜಕರಿಗೊಲಿದು ಅಭಯವಿತ್ತು ಸಲಹುವಾ ಈ ವರದರಾಜನೆ ಶ್ರೀವೆಂಕಟೇಶಾ । ನಿಜಮೂಡಲಾದ್ರಿಯೋಳ್ನೆಲಸಿಹನಾ ॥ ೭ ॥

**ಜತೆ** ॥ ಶ್ರೀರಘುರಾಮಾ ಯೆಂದಾರಾದರು ನೆನವರೆ ಶ್ರೀ । ವರದ ರಾಜ ವೆಂಕಟೇಶಾ ಸಲಹುವಾ ಶ್ರೀರಘುರಾಮಾ ॥ ೮ ॥ ಶ್ರೀಃ ॥

## ೫೭. ಸುಳಾದಿ.

ರಾಗ ಕಾನಡಾ.

**ಧ್ರುವತಾಳ** ॥ ಪರಬೊಮ್ಮಾ ಹರಿಯು ತಾಂ ನರರೂಪವ ತಾಳಿ ದಾ । ನರನಾದ ದಶರಥನ್ನಾ ವರಗೇಹದಲವತರಿಸಿ । ಶಿರಿರಾಮನೆಂಬಾ ಪುಣ್ಯನಾಮದಿಂದ ಮೆರವುತ್ತಿರೆ । ಹರುಷದಿಂದ ಲೀಲೆಗೈದು ಕರೆಯಬಂದಾ ಕೌಶಿಕನಾ । ಉರು ಯಜ್ಞ ವಿಘ್ನವನ್ನು ಪರಿಹರಿಸುವದಕ್ಕಾಗಿ ಆಟ ಪರ ಬೊಮ್ಮಾ । ಪರಿತಂದು ವಿಘ್ನವನ್ನು ಪರಿಹರಿಸಿದೆ ಮುನಿವರನಾ । ಹರುಷ ದಿಂದಾ ಪರಮಾನಂದಶರಧಿಯ ಶರಧಿಯ ಲೋಲಾಡಿಸಿದಾ । ಶಿರಿವಿಜ ಯೇಂದ್ರ ರಾಮಾ । ಹೊರೆಯಲಿಮ್ಮಾ ನಾವಾಗಾ ॥ ಆಟ ॥ ೧ ॥

**ಮಟ್ಟೆತಾಳ** ॥ ಈತನೆಂತು ಯಜ್ಞದಾ ವಿಘ್ನವ ಪರಿಹರಿಸುವಾ । ಪೂತ ಮಹಾದ್ಭುತರಂತಿಹ ರಕ್ಕಸರಾ । ವೀತ ಭಯನಾಗಿ ಕೊಲ್ಲುವ

ದೆಂತೊ । ಭೂತಳಕಚ್ಛರಿ ವಿಜಯೀಂದ್ರರಾಮನ ಚರಿತಾ ॥ ಪೂತ ಮಹಾದ್ಭುತದಂತಿಹಾ ॥ ೨ ॥

**ರೂಪಕತಾಳ** ॥ ಜನಕನೆಂಬಾ ಜನಪತಿಯ ಮನೆಗೆ ಪೋಗಿ ಜಾನಕಿಯಾ ಮನಕೆ ಹರುಷವಪ್ಪಂತೆ । ಜನಪದ ಕೈವಾರಿಸುತ್ತಿರೆ । ಮಾನಕ್ಕೆ । ಅಣಕವಾಡಿ ಶಿವನ ಧನುವಾ ಮುರಿದ ವಿಜಯೀಂದ್ರ ರಾಮಾ । ಮನಕೆ ಹರುಷವಪ್ಪಂತೆ ॥ ೩ ॥

**ಝಂಪೆತಾಳ** ॥ ಇವನಾರ್ಭಕನೆ ಇವನ ಮುನಿಗಳಾದವರೆಲ್ಲ ಮನದಿ । ಭಾವಿಸಿ ಕಾಣದೆಂಬುದರಿಯಾ ಆಟ ಯಲಿ ರಮಣಿ । ಭುವನ ಪಾವನ ನಾಮ ಶಿರಿವಿಜಯೀಂದ್ರ ರಾಮಾ ಮನದಿ ಭಾವಿಸಿ ॥ ೪ ॥

**ತ್ರಿಪುಟತಾಳ** ॥ ರಾಮ ಜಾನಕಿಯ ಮದುವೆಯಾಗಿ ಬಾಹಾಗ । ಪರಶುರಾಮನಿದಿರಿಸಿ । ಅವನ ಬಿಲ್ಲನೇರಿಸಿ ಮೆರದ । ರಾಮನಿದಿರಿಸಿ । ಸ್ವಾಮಿ ಲಾಂಗ ವಿಜಯೀಂದ್ರ ರಾಮ ಬಾಲಕನೆ ಹೇಳಾ । ರಾಮನಿದಿರಿಸಿ ॥ ೫ ॥

**ಅಟತಾಳ** ॥ ನೊಸಲಲ್ಲಿ ಕಣ್ಣಾ ಪಡದವನ ಗೆಲಿಗೈದೆ । ಅಸುಳೆಯೆಂದು ಬೆಂಕೊಂಡು ಕಂದನ ಕ್ಕಾದೆ । ಕುಸರಿ ಜವರೊಂದೇ ಬಾಣದಿಂದಾ ನಿಮಿಷದಿ ॥ ಅಸುಳೆ ಅಸಮವಿಕ್ರಮ ವಿಜಯೀಂದ್ರ ರಾಮಾ ಜಗದೊಳು । ಅಸುಳೆ ಯೆಂದು ಬೆಂಕೊಂಡು ಕಂದನ ಕ್ಕಾದೆ ॥ ೬ ॥

**ಏಕತಾಳ** ॥ ಉರವಣಿಸಿ ಬಾಹಾ ತಾಟಕಿಯ ಮಹಾ । ಕರಗಳ ನಿಮಿಷದಿ ಕತ್ತರಿಸುಯೆಂದು । ಹಿರಿಯರು ಪೇಳಲಿದುದು ಪೇಳಲಿ ತಾಯಿ । ಕರಗಳಸುರರ ಕಡಹಾ ವಿಜಯೀಂದ್ರ ರಾಮಾ ॥ ೭ ॥

**ಜತೆ** ॥ ಲೋಕಾಭಿರಾಮಾ ಸದ್ಗುಣಗಣಧಾಮಾ । ಲೋಕೈಕ ಭೂಮಾ ವಿಜಯೀಂದ್ರರಾಮಾ । ಲೋಕಾಭಿ ॥ ೮ ॥ ಶ್ರೀಃ ॥

## ೫೮. ಸುಳಾದಿ.

**ಧ್ರುವತಾಳ** ॥ ಕಂಡೆನಯ್ಯಾ ಕಂಡೆನಯ್ಯಾ ಕಮನೀಯ ಕಾಯ ದಲಿ । ಕಂಡ ಕಂಡ ಕಡೆಯಲ್ಲಿ ಮುಖಾಂಬುಜವಾ । ಕಂಡೆನಯ್ಯಾ ಕಂಡೆ

ನಯ್ಯಾ ಕಮನೀಯ ಕಾಯದಲಿ। ಕಂಡ ಕಂಡ ಕಡೆಯಲ್ಲಿ ಚಕ್ಷುಶ್ರೋತ್ರಂ ವಾ । ಕಂಡೆನಯ್ಯಾ ಆ ಆ ಭಂಡಿಯ ಮುಖದಿ ಥಳಥಳಿಸಿ ಮೆರವಾ । ಪಾಂಡುರಂಗ ಮಧ್ವಪತಿವಿಠಲನ ಕಂಡೆ ನಾ । ಕಂಡೆನಯ್ಯಾ ॥ ೧ ॥

**ಮಟ್ಟೆತಾಳ** ॥ ಈಶ್ವರೋಹಂಯೆಂದು ಒಗೆದು ಸರ್ವೇಶ್ವರನ್ನ ದ್ರೋಹಿಯಾಗಿ ಬಗೆದೆ ಕೆಡದೆ ಘಾಸಿಯಾಗಬೇಡ ಮಾನವಾ । ಆಸದಾನಂದ ನೆತ್ತಾ ಈಸದಾ ದುಃಖಿಯೆತ್ತಾ ಶ್ರೀಮಧ್ವಪತಿವಿಠಲನ್ನ ದಾಸನೆಂದು ಬದುಕು । ಆಸದಾನಂದನೆತ್ತಾ ॥ ೨ ॥

**ರೂಪಕತಾಳ** ॥ ಲಕ್ಷ್ಮಿದೇವಿ ರಾಣಿ ಬೊಮ್ಮಾದಿ ಭಕತರು । ದಕ್ಷ ಪ್ರಮುಖರಾತನ ಕಿಂಕರರೂ । ಪಕ್ಷಿವಾಹನನಪ್ಪ ಯೆನ್ನದಿರಾ । ಪಕ್ಷಿವಾಹನನಪ್ಪನೆಂಬ ಪೌಂಡ್ರಕನಾ । ಶಿಕ್ಷಿಸಿದನು ಶ್ರೀಕೃಷ್ಣನೆಂದರಿಯಾ । ಪಕ್ಷಿವಾಹನನಪ್ಪ ಯೆನ್ನದಿರಾ । ರಕ್ಷಿಸುವನು ಮಧ್ವಪತಿವಿಠಲ । ಪಕ್ಷಿವಾಹನನಪ್ಪ ಯೆನ್ನದಿರಾ ॥ ೩ ॥

**ಅಟತಾಳ** ॥ ನಾರಾಯಣ ನೀನಾದಡೆ ನಾನಾ ಭವದಲಿ ಭವದಲಿ ಬಪ್ಪಲಿದೇತಕ್ಕೆ । ನಾನಾ ಯೋನಿಯಲಿ ತಿರುಗುವದೇತಕ್ಕೆ ॥ ನಾನಾ ನರಕದಲಿ ಮುಳುಗುವದೇತಕ್ಕೆ ನಾರಾಯಣ ನೀನಾದಡೆ । ನಾರಾಯಣ ಗುರು ಮಧ್ವಪತಿವಿಠಲನು ನಾರಾಯಣ ನೀನಾದಡೆ । ೪ ॥

**ಏಕತಾಳ** ॥ ಪರಬೊಮ್ಮಾವೆರಡೆಂಬ ನಡೆ ಬೇರೇ ನುಡಿ ಬೇರೆ । ಗುರು ಪರಬೊಮ್ಮಾ ಕಂಡಾ ಶಿಷ್ಯ ಪರಬೊಮ್ಮಾ ಕಂಡಾ । ಪರಬೊಮ್ಮವೆಂಬಾ ಮರುಳರನೇನೆಂಬೆ । ಪರಬೊಮ್ಮಾ ಮಧ್ವಪತಿವಿಠಲರಾಯನು । ಪರಬೊಮ್ಮವೆರಡೆಂಬಾ ॥ ೫ ॥

**ಜತೆ** ॥ ಮಧ್ವಪತಿವಿಠಲನ ದಾಸರ ಮನೆಯಾ। ದಾಸರದಾಸೆಂದೂ ಬದುಕೆಲಾ ಮನುಜಾ । ಮಧ್ವಪತಿವಿಠಲನ ದಾಸರ ಮನೆಯಾ ॥ ೬ ॥



# ೫೯. ಸುಳಾದಿ.

**ಧ್ರುವತಾಳ** ॥ ತರುಣಿ ನಿನ್ನಾ ಕಾಲೆರಗಿ ಶರಗೊಡ್ಡಿ ಬೇಡುವೆ । ಹರಿಯಾ ತಂದೆನ್ನನುದ್ಧರಿಸು ಮಾನಿನಿರನ್ನೆ ಸ್ಮೃತವಮಂದಾರಳೆ ಶುಭೋದಯರೂಪಕಳಧರಾ । ತರುಣಿ ನಿನ್ನ ವಿರಹವೇದನೆಯಿಂದಾ । ಹರಣ ನಿಲ್ಲದು ತಾಯೆ ಗುರು ಮಧ್ವಪತಿವಿಠಲಾ ನೆರಗದಾಲುಳುಹುವೆ ನಾ । ತರುಣಿ ನಿನ್ನಾ ॥ ೧ ॥

**ಮಟ್ಟೆತಾಳ** ॥ ನಗಧರನಗಲಿದ ದಿನವೆನಗೊಂದು । ಯುಗವಾಗಿದೆಯವ್ವಾ । ಯುಗವಾಗಿದೆಯವ್ವಾ । ಅವನ ಕರದು ತಂದು ತೋರೆ ಬೇಗದಿ ಯುಗವಾಗಿದೆಯವ್ವಾ । ಯುಗವಾಗಿದೆಯವ್ವಾ । ಜಗನ್ಮೋಹನ ಗುರು ಮಧ್ವಪತಿವಿಠಲನ ಕಾಣದೆ । ಒಂದು ನಿಮಿಷ ಯುಗವಾಗಿದೆಯವ್ವಾ ॥ ೨ ॥

**ರೂಪಕತಾಳ** ॥ ಅರಿಗುಸುರುವೆ ಆರೆನ್ನ ಕಾವರು । ಕಾರಣವಿಲ್ಲದೆ ನಲ್ಲ ಮುನಿದನವ್ವಾ । ಸೇರೆ ಅವನ ತಂದು ತೋರೆ ತಡಮಾಡದೆ । ಕಾರಣವಿಲ್ಲದೆ ನಲ್ಲ ಮುನಿದನವ್ವಾ । ದೇವೇಶ ಗುರು ಮಧ್ವಪತಿವಿಠಲಾ ತಾನು । ಕಾರಣವಿಲ್ಲದೆ ನಲ್ಲ ಮುನಿದನವ್ವಾ ॥ ೩ ॥

**ಅಟತಾಳ** ॥ ದೈವಹೀನೆಯ ರಿಗವೃತ ವಿಷವಾದಂತೆ । ದೈವಹೀನೆ ಯೆನಗೆ ಬಲ್ಲಿದ ಮದನನ । ಹೂವಿನಂಬಲಿಗಾದವು ನಲ್ಲ ಮುನಿದಿರೆ । ದೈವಹೀನೆ ಯೆನಗೆ ಬಲ್ಲಿದ ಗುರು ಮಧ್ವಪತಿವಿಠಲನಾ । ದೈವಹೀನೆ ಯೆನಗೆ ॥ ೪ ॥

**ಏಕತಾಳ** ॥ ವಲಿದವಳ ಬಳಲಿಪುದುಚಿತವೆ ಲಲನೆ । ಅವನ ಕರದು ತಂದು ತೋರೆ ಬೇಗದಿ ಲಲನೆ । ವಲಿದವಳ ಬಳಲಿಪುದುಚಿತವೆ ಲಲನೆ । ಸುಲಭ ಗುರು ಮಧ್ವಪತಿವಿಠಲನ ಕಾಣದೆಯಿಂದು ಲಲನೆ । ವಲಿದವಳ ಬಳಲಿಪುದುಚಿತವೆ ಲಲನೆ ॥ ೫ ॥

**ಜತೆ** ॥ ಸಖಿಯೇ ಯೆನ್ನ ಪುಣ್ಯ ಫಲಿಸಿತು । ಸಖಿಯೇ ಗುರು ಮಧ್ವಪತಿವಿಠಲನ ಕಂಡೆ ನಾ । ಸಖಿಯೇ ಯೆನ್ನ ಪುಣ್ಯ ಫಲಿಸಿತೂ ॥ ೬ ॥

## ೩೦. ಸುಳಾದಿ.

ರಾಗ ಮುಖಹರಿ.

**ಧ್ರುವತಾಳ** ॥ ಹಿರಣ್ಯಕನುದರ ಬಗಿದು ಪ್ರಹಲ್ಲಾದನಿಗೆ । ಪರಮ ಪದವಿಯಿತ್ತಾ ಘನಮಹಿಮನೆ ನಮೋ । ತರುಣಿ ಸಭೆಯಲಿ ಹಾ ಕೃಷ್ಣಾ ಹಾ ಯೆನೆ ಕೇಳಿ । ಕರುಣದಿಂದಕ್ಷಯಾಂಬರವನಿತ್ತನೇ ನಮೋ । ಕರಿ ಮಕರಿಗೆ ಸಿಕ್ಕಿ ಕಡುನೊಂದಾದಿಮೂಲವೆಂದೊ । ಮರುತಿರಲು ಅಲ್ಲೈಸಿ ಕೇಳಿ ಶಿರಿಯೊಡನೆ । ಸರಸಮೊಳಯಿರುತ್ತಿರೆ ಧಿಗಿಲೆಂದು ಚಕ್ರದಿ ಮಕರಿಯ । ಸರಿದು ಗಜವನು ತೊರವಾ ಘನಮಹಿಮನೇ ನಮೋ । ಶರಧಿಶಯನಾ ಸರಸಿಜನಯನಾ । ಸುರನರ ಪೂಜಿತಾ ಶುಭಚರಿತಾ । ಪರಮಪುರುಷಾ ಪುರುಷೋತ್ತಮ । ಪರಮೇಶ್ವರಾ ಘನವರ ಪಾವನಚರಿತಾ । ಮುರಮಥನಾ ಮುಕುಂದಾ ಮುನಿವರ ನರಸಮಿತಾ । ಸನಕಾದಿಸೇವಿತ ಗುರುಮಧ್ವಪತಿವಿಠಲಾ । ಶರಣಾಗತ ರಕ್ಷಾಮಣಿ ಹರಿಯೇ ॥ ೧ ॥

**ಮಟ್ಟೆತಾಳ** ॥ ದಿತಿಜರೂ ಅದಿತಿಜರೊಂಡಿಯಲಿ ಶರಧಿಯನು ಮಥಿಸಲೂ । ಗಿರಿ ಮುಳುಗಿ ಮಂದರವನೆಗಪಿ ಚತುರಾನನ ಜನಕಾ । ಚತುರಾನನ ಜನಕ ಯೆಂದು ಸ್ತುತಿಸಲು ಗುರುಮಧ್ವಪತಿವಿಠಲ ನಿಂತಾ ಕಾರುಣ್ಯವೆನೆಂತೋ ॥ ೨ ॥

**ರೂಪಕತಾಳ** ॥ ಅಖಿಲಜಗತ್ಕಾರಣನೇ ನಮೋ । ಅಕಳಂಕ ಚರಿತ ನಮೋ । ಭಕ್ತವತ್ಸಲನೆ ನಮೋ ನಮೋ । ಭವಭಂಜನೆ ನಮೋ ನಮೋ । ಅಕುತೋಭಯ ನಮೋ । ಆದಿಮೂಲನೆ ನಮೋ ನಮೋ । ರುಕುಮಿಣೀಶ ಗುರುಮಧ್ವಪತಿವಿಠಲನೆ ನಮೋ ನಮೋ ॥ ೩ ॥

**ಝಂಪೆತಾಳ** ॥ ಚತುರಮುಖಾ ಪಂಚಮುಖಾ । ಶತಮುಖಾದಿಗಳು ತಮ್ಮ । ಮತಿಕೌಶಲಗಳಿಂದ ನಿನ್ನ ಘನಗುಣಗಳನೂ । ಸ್ತುತಿಸಿ ಕಡೆಗಾಣರೆಂದರೆ । ತಮ್ಮ ವಂದಿತರೆ ಯೆನ್ನ ಮತಿಗೆಂತು ಸುಲಭನೆ । ಯೆಲೆ ಚಿನುಮಯ್ಯ ನಿನ್ನನೆ ಸ್ತುತಿಸಿ । ಶ್ರುತಿವಂದ್ಯ ಪಾವನಚರಿತ ನಮ್ಮ

ಗುರುಮಧ್ವ । ಪತಿವಿಠಲಾ ವಿಠಲಾ ಯೆಂದು ಧನ್ಯರಾಗಿ ನಿನ್ನನೆ ಸ್ತುತಿಸಿ ॥ ೪ ॥

**ತ್ರಿಪುಟತಾಳ** ॥ ಕುಂಭಿನಿ ಭಯನಿವಾರಣ । ಜಂಭಭೇದಿ ಶಂಭೂನಮಿತಾ । ಅಂಬುಜಾರಮಣಾ ಕಮಲ । ಸಂಭವ ಪೂಜಿತ ಚರಣಾ । ಅಂಬುಜಾರಮಣಾ । ಕಂಬುಕಂಠ ಗುರುಮಧ್ವಪತಿವಿಠಲಾ । ಅಂಬುಜಾರಮಣಾ ॥ ೫ ॥

**ಅಟತಾಳ** ॥ ತನುಧನ ಮನವನೆವಾರತೆಯಿಂದಾ । ದಿನದಿನದಿ ಆನಂದಪುಳಕರಾಗಿ । ನೆನನೆನದು ನಿನ್ನಾ ಚರಣಕಮಲವಾ । ಯೆನಗೆಂದಿಗೆ ದೂರಗೊಂಬುದೆಲೆ ಹರಿಯೇ । ವನಜನಯ್ಯನು. ಶಿರಿವನಿತೆಯರಸನೂ । ನಿನ್ನವನು ನಾನು ಗುರುಮಧ್ವಪತಿವಿಠಲಾ ॥ ೬ ॥

**ಏಕತಾಳ** ॥ ವೃಂದಾವನಪತಿ ಗೋವಿಂದಾ । ಮಾಪತಿ ಪರಮಾನಂದಾ । ಯದುಪತಿ ಸನಕಸನಂದಾ । ನಾರದಾದಿ ಮುನಿಜನವಂದ್ಯಾ । ಯೆಂದೆಂದೆಂದೆಂದು ಸಲಹೋ । ಕರುಣದಿಂದ ಗುರುಮಧ್ವಪತಿವಿಠಲಾ । ಯೆಂದೆಂದೆಂದೆಂದು ಸಲಹೋ ॥ ೭ ॥

**ಜತೆ** ॥ ಜಯಜಯಾ ದನುಜಾಮರ್ದನಾ ವಿಜಯಾ । ಸಖಿ ಗುರುಮಧ್ವಪತಿವಿಠಲಾ ಜಯಜಯಾ ॥ ೮ ॥ ಪ್ರೀತಿ ॥

## ೭೧. ಸುಳಾದಿ.

**ಧ್ರುವತಾಳ** ॥ ಗಂಗಾಜನಕಾ ನಿನ್ನ ಪಾದಂಗಳ ಹಿಂಗದೆ ನೆನವಾ ಭಕ್ತರ । ಸಂಗಾ ಮಂಗಳಾಕಾರ ಮುಕ್ತಿ ಪರಭಾವಾ । ಭಂಗ ಸಂಸಾರ ಉತ್ತಾರಕಾ । ಗಂಗಾ । ಇಂಗಾಡಲದೊಡೆಯಾ ನಿನ್ನವನವನೂ । ಸಲಹಂಗಜಪಿತ ಗುರುಮಧ್ವಪತಿವಿಠಲಾ ॥ ಗಂಗಾ ॥ ೧ ॥

**ಮಟ್ಟತಾಳ** ॥ ಶಿರಿಪತಿ ಸರಸಿಜಸಂಭವ ಪಿತ ನಿನ್ನಾ । ಪರದೇವತೆ ಯೆಂದರಿದು ಭಜಿಸಲಂದೆ । ಕಿರುಕುಳ ದೈವವ ಕೆಳಗಿ ಬಳಲುವಿರಿಸಿ ಪರದೇ

ವತೆಯೆಂಬುದಾ । ಗುರುಮಧ್ವಪತಿವಿಠಲಾ ಇಹಪರಕಾರಣ ನೀ ಪರದೇವತೆಯೆಂಬುದಾ ॥ ೨ ॥

**ರೂಪಕತಾಳ** ॥ ಬೊಮ್ಮ ಮೊದಲಾದ ಸುರರೂ । ಮನುಗಳೆಮ್ಮಾನು ನಿನ್ನ ಪೊಗಳಲೂ । ಜಲಹಂಗಜಪಿತ ಗುರುಮಧ್ವಪತಿವಿಠಲಾ । ನಿನ್ನಾ ಪೊಗಳಲೂ ॥ ೩ ॥

**ಝಂಪೆತಾಳ** ॥ ನಿನ್ನ ಮೂರುತಿಯ ಪಾವನಕೀರುತಿಯಾ ಯೆನ್ನ ಮನವನೂ । ದಿನ ಸುಖಿನ್ನವಾಯಾ ಸುಖಿವಯಿಪ್ಪುದಿನ್ನೆಂತೋ । ಯೆನ್ನ ಜೀವನೇಶ ಗುರುಮಧ್ವಪತಿವಿಠಲಾ ॥ ೪ ॥

**ತ್ರಿಪುಟತಾಳ** ॥ ಶಂವರದ ಕರಿಚರ್ಮಧರನುತ । ಕರಿಭಯಂಕರ ಕರುಣಾಕರ ಕಮನೀಯಮೂರುತಿಯಾ । ವರದ ಕೀರುತಿಯಾ । ಅಸುರವರಾಸುರಹರಾಪರೇಶ ಗುರುಮಧ್ವಪತಿವಿಠಲಾ ॥ ೫ ॥

**ಅಟತಾಳ** ॥ ವೇದಶಾಸ್ತ್ರ ಪುರಾಣಂಗಳ ಬಿಡದೋದಿ ಫಲವೇನು । ಹರಿ ಪರದೈವವೆಂಬುವ ಮನುಜರು ಬಿಡದೋದಿ ಫಲವೇನೂ । ಆದಿದೈವ ಗುರುಮಧ್ವಪತಿವಿಠಲಾ ಪರದೈವವೆಂಬುದಾ ॥ ೬ ॥

**ಏಕತಾಳ** ॥ ಯೆಂದೆಂದೆನಮನದಿಂದಗಲದಿರಾ । ನಂದನಂದನ ಗೋವಿಂದ ಗೋಪಾಲ । ಇಂದಿರೇಶ ಗುರುಮಧ್ವಪತಿವಿಠಲಾ ॥ ೭ ॥

**ಜತೆ** ॥ ಚರಣಕಮಲವೇ ಗತಿ ಯೆನಗೆ ಯೆಂದೆಂದು । ಕರುಣಿಸಯ್ಯಾ ಗುರುಮಧ್ವಪತಿವಿಠಲಾ ॥ ೮ ॥ ಶ್ರೀಃ ॥

## ೬೨. ಸುಳಾದಿ.

**ಧ್ರುವತಾಳ** ॥ ಕೊಂಬು ಕೊಳಲುಗಳಾ ತಿತ್ತಿರಿ ಮದ್ದಲೆ ಕಾಳೆಯಾ । ಭುಂ ಭುಂ ಭುಂ ಭುಂವೆನುತಾ ಗೋಪಾಲಕರೊಡನೆ । ಕಂಬಳಿಯ ಹೆಗಲಲಿತೆಹೂದಳಿಲುಡಿಗೆಯಲಿ । ಅಂಬೆಯೆಂದೊದರಿ ಬಪ್ಪ ತುರುಜಂಗುಳಿ

ಗಳ । ಬೆಂಬಳಿಯಲಿ ಹರಿ ನೀ ನಲಿದಾಡೆ । ಅಂಬುಜಸಂಭವ ಸುರರಂಬರದಲ್ಲಿ ನೋಡಿ ನಗಲೂ । ಕೊಂಬು ಕೊಳಲೂ ಶಂಭುಮುಖ್ಯ ಸುರನಮಿತ ಪಾದಾ । ಶಂಬರಾರಿಜನಕಾ ಅಂಬುಧಿಶಾಯಿಾ ಅನುಪಮಗುಣನಿಲಯಾ । ಎಂಬಾಗಮಕೆಂತೆನೆ ಗುರುಮಧ್ವಪತಿವಿಠಲಾ । ಕೊಂಬು ಕೊಳಲೂ ॥ ೧ ॥

**ಮಟ್ಟೆತಾಳ** ॥ ಕಲ್ಪತರುವ ನಂಬಿ ನಿನ್ನ ಬೆರಳುಂಗುರಗಳ ಶೆಳೆ ನಡುವಿನ । ಚಲ್ಲಣ ಕಸ್ತುರಿತಿಲಕದ ಹೊಳವ ಗುರುಮಧ್ವಪತಿವಿಠಲ ಹೊಳವ ॥ ೨ ॥

**ರೂಪಕತಾಳ** ॥ ಪೊಂಗೊಳಲನೂದಿ ಸೋಳಸಾಸಿರ ಹೆಂಗಳ ಮನವಾ ಮರುಳುಮಾಡಿ ತ್ರಿ । ಭಂಗಿಯಲಿ ನಿಂತಾ ತ್ರಿಭುವನದೊಡೆಯಾ । ಹೆಂಗಳ ಮನವಾ ರಂಗಾ ಗುರುಮಧ್ವಪತಿವಿಠಲಾ । ಹೆಂಗಳ ಮನವಾ ॥ ೩ ॥

**ಝುಂಪೆತಾಳ** ॥ ಕಡಹದಮರನೇರಿ ಧುಮುಕಿ ಕಾಳಿಂಗನ ಪೆಡೆವಣೆಗಳಲುಗಲುಂದಿಗೆ । ಖಡೆಯರವದಿ ಹೀಂದುದಿಯಿಂದ ತುಳಿದು ತುಳಿದು ನಲಿದಾಡುವ ಸುರ । ರೊಡೆಯಾ ಹರ ಕಮಲಭವಾದಿಗಳು ಘೇ ಯೆನಲು ಹೀಮತದಿಂದಾ । ಬಿಡದೆ ಪೊಗಳುವಾ ನಾಗಸತಿಯರೋಲೆಯಾ ಕಾಯೋ । ಮಡುವ ಬಿಡಿಸಿದೆ ಗುರುಮಧ್ವಪತಿವಿಠಲಾ ॥ ಹೀಮತದಿಂದ ತುಳಿದು ತುಳಿದು ನಲಿದಾಡುವಾ ॥ ೪ ॥

**ತ್ರಿಪುಟತಾಳ** ॥ ಬಿಲ್ಲಾಹಬ್ಬದ ನೆವದಿ ಚಾಣೂರ ಮುಷ್ಟಿಕರ । ಮಲ್ಲರಾಗಿಪ್ಪರುಗಳ ಝುರಿದೂ ಕಂಸನಾ ಅಸೂವಾನಿಂಟದೆ । ಮಲ್ಲರ ನಿಟಿಲುಗಳ ಮುರಿದಾ । ಬಲ್ಲಿದ ಗುರುಮಧ್ವಪತಿವಿಠಲರಾಯಾ । ಮಲ್ಲರಾ ನಿಟಿಲುಗಳ ಮುರಿದಾ ॥ ೫ ॥

**ಅಟತಾಳ** ॥ ವಸುದೇವಾ ದೇವಕಿಯರಿಗಾನಂದಾ ವಸಗೆಯ ವಲಿದಿತ್ತೆ । ದೇವತೆಗಳೂ ಸ್ತುತಿಸೂತಿರೆ ವಸಗೆಯಾ । ಬಿಸಜನಯನ ಗುರುಮಧ್ವಪತಿವಿಠಲಾ । ವಸಗೆಯಾ ॥ ೬ ॥

**ಏಕತಾಳ** ॥ ಪಟ್ಟವನೂ ಉಗ್ರಸೇನಂಗೆ ಕಟ್ಟಿ ಜರಾಸಂಧನಾ ಛಲವಾ ತರಿದೊಪ್ಪಿ ಯೆಂಭತ್ತುನಾಲ್ಕು । ಬೆಟ್ಟಗಳಲಿ ತೊಳತೊಳಗಲು

ತರಿತಂದೊಪ್ಪಿ ಯೆಂಭತ್ತನಾಲ್ಕು ಬೆಟ್ಟಗಳಲ್ಲಿ । ಧಿಟ್ಟ ಗುರುಮಧ್ವಪತಿ ವಿಠಲಾ ವಿನೋದರಾಯಾ । ಯೆಂಭತ್ತು ॥ ೭ ॥

ಜತೆ ॥ ಪಾಂಡವ ಪ್ರತಿಪಾಲಕಾ ಕೌರವ ಸಂಹಾರಕಾ । ಗುರು ಮಧ್ವಪತಿವಿಠಲಾ । ಪಾಂಡವ ಪ್ರತಿಪಾಲಕಾ ॥ ೮ ॥ ಶ್ರೀಃ ॥



## ೭೩. ಸುಳಾದಿ.

ಧ್ರುವತಾಳ ॥ ಶ್ರೀವಿಭುವೆ ನಿನ್ನ ಘನಮಹಿಮೆಯೆಂತೋ । ಜಲದ ಬಳಿಯಲಾಲದೆಲೆಯ ಮೇಲೊರಗಿದೆ । ಶ್ರೀವಿಭುವೆ ಉದರದಲಿ ಜಗವ ಧರಿಸಿ ಶಿಶುವಾದೆ । ಶ್ರೀವಿಭುವೆ ಅಣುವಿನಲ್ಲಿ ಮಹತ್ತನಡಗಿಸಿ ಶಿಶುವಾದೆ ಜಗ ಭರಿತ । ಶ್ರೀವಿಭುವೆ ನಿನ್ನ ಘನಮಹಿಮೆಯೆಂತೋ । ಆಗುರುಮಧ್ವಪತಿ ವಿಠಲಾ ವ್ಯಾಸಮುನೀಶಾ ॥ ೧ ॥

ಮಟ್ಟೆತಾಳ ॥ ಉರವಣಿಪ ಶ್ರುತಿಗಳಿಗೆ ಉನ್ನತೋನ್ನತ ಮಹಿಮ ನಪ್ಪ । ಶಿರಿ ಅಜಭವೇಂದ್ರಾದಿಗಳ ಮತಿಗೆ ಸಿಲುಕದಿಪ್ಪ । ತುರುಗಾಹಿಗಳಿ ಗೊಡನಾಡಿಯಾಡುತಲಿಪ್ಪೆ । ಶಿರಿ । ಗುರುಮಧ್ವಪತಿವಿಠಲ ವ್ಯಾಸಮುನಿ ವಂದ್ಯನಪ್ಪ ॥ ಶಿರಿ ॥ ೨ ॥

ರೂಪಕತಾಳ ॥ ಅಣುಮೂರುತಿಯಾಗಿ ವಂದು ಘನಗಿರಿಯ ಬೆರ ಳಕೊನೆಯಲೆತ್ತಿದ । ಅಣುಮೂರುತಿಯಾಗಿ ಗಜವ ಹಣಿದಾಡಿದೆ ಮಲ್ಲರ ಮುರಿದೆ । ಅಣುಮೂರುತಿಯಾಗಿ ತವಗದಕೊನೆಯಲಿಪ್ಪ ಕಂಸನ ನೆಲ ಕೊರಸಿದೆ । ಗುಣಮಹೀಮನೆ ಗುರುಮಧ್ವಪತಿವಿಠಲಾ ನೀ ವ್ಯಾಸಮುನಿಯ ಮನದೊಳಿಪ್ಪುದೀಗ ಅನುಭವ ನಮಗಲ್ಲವೆ ॥ ೩ ॥

ಝಂಪೆತಾಳ ॥ ಅಣುಮೂರುತಿಯಾಗಿ ಬಲಿಯ ದಾನವ ಬೇಡೀ ದರಿತ್ತರೆ । ಘನಮೂರುತಿಯಾಗಿ ಆಕ್ರಮಿಸಿದ ಧರೆಯನಳದೆಯಾಗಿ । ಅಣು ವಿನೊಳಗೆ ಮಹತಿಪ್ಪದು ಮಹತ್ತಾಲಿ ಅಣುವಿಪ್ಪುದು । ಅನುಭವವಲ್ಲವೆ

ನಿನ್ನ ಅಚ್ಚುಮೆಚ್ಚುನಾಳುಗಳಿಗೆ । ಘನಮಹೀಮನೆ ಗುರುಮಧ್ವಪತಿವಿಠಲ ನೀ ವ್ಯಾಸಮುನಿಯ ಮನದೊಳಿಪ್ಪುದೀಗ ॥ ಅನುಭವ ನಿಮಗಲ್ಲವೆ ॥ ೪ ॥

**ತ್ರಿಪುಟತಾಳ** ॥ ರಂಗ ರಾಮ ರಾಜೀವಲೋಚನ । ಗಂಗಾಪಿತ ಗಜನುತ ವಿ । ಹಂಗಗಮನ ಭುಜಂಗಶಯನ ಶು । ಭಾಂಗ ಮಂಗಳಾಂಗ ವಿಕ್ರಮ । ಭಂಗವಿರಹಿತ ಭಾನುಕೋಟಿತೇಜಾ ಜಗ । ಪುಂಗವ ಗೋಪಾಂಗ ಮಂಗ । ಳಂಗಳಾಭರಣಾಂಗಳಿಗೆ ನಮೋ ॥ ತುಂಗಾ । ಹೀಂಗದೆ ಗುರುವ್ಯಾಸಮುನಿಯ ಅಂತ । ರಂಗದಲ್ಲಿ ನೆಲಸಿಪ್ಪಾ ಶುಭಾಂಗ ಗುರುಮಧ್ವಪತಿವಿಠಲ ನಿನ್ನ । ಮಂಗಳಾಭರಣಾಂಗಳಿಗೆ ನಮೋ । ತುಂಗಾ ॥ ೫ ॥

**ಅಟತಾಳ** ॥ ಅಂಬುಜಸಂಭವನ ಕೋಟಿಕೋಟಿಗಳಿಗೆ । ಇಂಬುಗೊಂಡೆ ನಿನ್ನ ರೋಮಕೂಪದೊಳಗೆ । ಅಂಬುಜಭವಭವ ಸುರಪತಿ ಸುರನಿಕು । ರುಂಬಕೆ ನಿನ್ನವಯವಾದಿ ತೆರಹೋತೊಪ್ಪ । ಯೆಂಬದು ನಿಗಮವಚನದಿಂದ ಪ್ರಸಿದ್ಧಾ ॥ ಅಂಬುಜಾಕ್ಷ ಗುರುಮಧ್ವಪತಿವಿಠಲಾ ಈ । ಇಂಬುಗೊಂಡಿ ಗುರುವ್ಯಾಸಮುನಿ ಮನವಾ ॥ ೬ ॥

**ಏಕತಾಳ** ॥ ಸಪುತಸಾಗರ ಸಪುತದ್ವೀಪ । ಸಪುತಲೋಕನಾಯಕ । ಅಪಾರಮಹೀಮಾ ಅನಂತನಾಮಾ । ಉಪಮಾತೀತ ಉರುಗುಣ ಸುಭರಿತ ಚರಿತ ಗುರುಮಧ್ವಪತಿವಿಠಲಾ ವ್ಯಾಸಮುನೀಶಾ ॥ ೭ ॥

**ಜತೆ** ॥ ಗುರುವ್ಯಾಸರಾಯನ ಮನಕಮಲಕ್ಕೆ ನಮೋ । ಗುರು ಮಧ್ವಪತಿವಿಠಲನ ಪಾದಕೆ ನಮೋ ॥ ೮ ॥ ಶ್ರೀಃ ॥

## ೬೪. ಸುಳಾದಿ.

**ಧ್ರುವತಾಳ** ॥ ವೃಂದಾವನದಲ್ಲಿ ಸುಳಿವನಲ್ಲೆ ತರು । ವೃಂದರೂಪಿನ ಮುನಿವೃಂದದೊಳಗೆ ಗೋಪಾ । ವೃಂದದೊಳಗೆ ದುನ್ನವಾಡುತಲಿ ಗೋಪಾ । ವೃಂದದೊಳಗೆ ಸುಳಿಸುತಲೊಯ್ಯನೆ ರಾಗಾ । ವೃಂದರಸದಿ ಪೊಂಗಳಲತಿವಿತತ ಬೆರಳ । ವೃಂದವಾ ಮರುಳುಗೊಳಿಸುತಾಲೆಮ್ಮಯಾ

ಕೆಳದಿ । ವೃಂದಾವನದಲಿ ಸುಳಿವನಲ್ಲೆ ಅಮರ । ವೃಂದವಾನೆಲ್ಲವಾ ನೋಒಸುತಾ ಪ್ರಾಣಿ । ವೃಂದಾವು ಯಿರವ ಮರಸುತಲಿ ಗುಣಗಣಗಣಾ । ವೃಂದಾ ವರದರಾಜ ಕೃಷ್ಣ ತಾ ಹೆಂಗಳಾ । ವೃಂದಾವ ಮರುಳುಗೊಳಿಸು ತಾಲೆಮ್ಮಯ್ಯ ಕೆಳದಿ । ವೃಂದಾವನದಲ್ಲಿ ಸುಳಿವನಲ್ಲೆ ॥ ೧ ॥

**ಮಟ್ಟೆತಾಳ** ॥ ಲೀಲಾವತಿಯೊಳೆಮ್ಮಾ ನಲ್ಲನನ್ನೊದಾ ನಮ್ಮೆಲ್ಲರ ಮೋಹಿಸಿದಾ । ಅಕ್ರೂರಗೆ ಸಲ್ಲದ ಕ್ರೂರನೆಂದೆಂಬರೂ । ಒಳ್ಳೆಯ ಪೆಸರು ಸಲ್ಲದು ನಮ್ಮೆಲ್ಲರ ಬಲ್ಲಿತನವನೂ ಯೆಲ್ಲಿಗ್ಹೋಯಿತೂ । ವಲ್ಲಭೆ ಸಲ್ಲದ ಕ್ರೂರನೆಂದೆಂಬರೂ । ಫುಲ್ಲಶರನಪಿತ ಶಿರಿವರದರಾಜ ಕೃಷ್ಣಾ ನಮ್ಮೆಲ್ಲರು ಗಳ ಚೆಲುವಿನಾ । ಜಲದಲ್ಲಿ ಮುಳುಗುವರಂತೆ ಫುಲ್ಲಶರನಾ ॥ ೨ ॥

**ರೂಪಕತಾಳ** ॥ ವೃಂದವೃಂದದೊಳಾನಂದಾವೀವನು ಬೇಗ। ದಿಂದ ಕರದ್ಯೊದಾ ಬುಧರು ಯೋ। ನೆಂದು ಕರದರೆ ಈಪೆಸರಿನಲಿ ಅದ। ರಿಂದಾ ಮೋಹಿಸಿದೆವು ಮಂದಾಮತಿಯಲಿ ಯೋ । ನೆಂದು ಕರದರೆ ಈಪೆಸರಿನಲಿ । ಇಂದಿರೇಯರಸ ವರದರಾಜ ಕೃಷ್ಣಾ ತಾ । ಮಂದಹಾಸದಲಿ ಚಂದ್ರಿಕೆಯ ಸೂಸುವರು ಯೋ । ನೆಂದು ಕರದರೆ ಈಪೆಸರಿನಲಿ ॥ ೩ ॥

**ಝಂಪೆತಾಳ** ॥ ಪ್ರೀತಿಯಿಂದಲಿ ನಾವು ಪೋತುಸೋತೆವು ಪ್ರಾಣ। ಘಾತಕತನವವ ಮಾಡಿ ಕರದ್ಯೊದಗೆ । ಯಾತಕೀ ಪೆಸರಾನಿತ್ತ ಕಾಣೆರೋ। ಸಾತ್ವಿಕಾರರಸಾ ಶಿರಿವರದರಾಜ ಕೃಷ್ಣಾ ನಮ್ಮ ಮನದ । ಕಾತರವಾ ಕಲಿಸಿ ಅತಿಪ್ರೀತಿಯಾದಾ ಮಾತು । ಯಾತಕೀ ಪೆಸರಾನಿತ್ತುದ ಕಾಣೆರೋ ॥ ೪ ॥

**ತ್ರಿಪುಟೆತಾಳ** ॥ ಸ್ಮರಪಿತೆಮ್ಮಯ ತನುವನು ಮರುಳುಮಾಡಿದ ಗೋವಳೆನ್ನಾ । ಕಿರುವತನದಲಿ ಕರದ್ಯೊದಾ ಮೂರುಕನು ಮನದಾ ಇರವಾನರಿಯದೆ ಕರದನೂ । ಕಿರುವಿನೊಳಗೊಳಗಿರುವಾ ಮನದಿರವನರಿಯದೆ ಕರದನೂ । ತರಳೊಳುಪಚರಿಪ ಶಿರಿವರದರಾಜ ಕೃಷ್ಣಾ ನಮ್ಮ ಶರಗ ಕರದಲಿ ಪಿಡಿದು ಶೆಳೆವುತಾ ಹರುಷಶರಧಿಯುಲೊರಗಿಸುವಂತೆ । ಮನದ ಇರವಾನರಿಯದೆ ಕರದನೂ ॥ ೫ ॥

**ಅಟತಾಳ** ॥ ನಮ್ಮ ಪ್ರಾಣೇಶನ ಸುಮ್ಮನೊಮ್ಮೆ ಬಂದು ಗಮ್ಮನೆ ನೆಳದ್ಯೊದಾ ಅಕ್ರೂರಗೆ ಬೊಮ್ಮನೇಕೆ ಸೃಜಿಸಿದನೂ । ಅವಮ್ಮಾ ನಮ್ಮ ನಿಮ್ಮಿದ್ದೆಡೆಗೆ ನಿಮಿಷಕೆ ಸಲಿಸುವಾ । ಬೊಮ್ಮನೇಕೆ ಸೃಜಿಸಿದನೂ ನಿರ್ಮಲರೂಪ ವರದರಾಜ ಕೃಷ್ಣ ತಾ । ನಮ್ಮೊಳು ಬೆಳಮಳದಿ ಚರಿಸುವ ನೆಂತೋ । ಬೊಮ್ಮನೇಕೆ ಸೃಜಿಸಿದನು ॥ ೬ ॥

**ಏಕತಾಳ** ॥ ತಿಂಗಳಾ ಬೆಳದಿಂಗಳೊಳಗೆ ತಂಗಾಳಿಯ ಸುಳಿವುತಾ ಲೊಯ್ಯನೆ । ರಂಗಾ ಪುಳಿನಂಗಳೊಳಗೆ ನಮ್ಮಂಗ । ಸಂಗದೊಳಿಂಗಡಲೊಳ ಮುಳುಗಿಪ್ಪಾ ರಂಗಾ । ಮಂಗಳರೂಪ ವರದರಾಜ ಕೃಷ್ಣಾ ತಾ । ಕಂಗಳ ಪಾಂಗದಿ ಸಂಗಡಿಸುವನೆಂತೋ । ರಂಗಾ ಪುಳಿನಂಗಳೊಳಗೆ ॥ ೭ ॥

**ಜತೆ** ॥ ಶ್ರೀಪತಿ ವರದರಾಜ ಕೃಷ್ಣಾ ವಿರಹತಾಪದಿ । ಗೋಪಿ ಗೋಪಾಂಗನೆಯರು ಈಪರಿ ಕಳದರೂ ॥ ೮ ॥ ಶ್ರೀ ॥



## ೭೫. ಸುಳಾದಿ.

ರಾಗ ಭೂಪಾಳಿ.

**ಧ್ರುವತಾಳ** ॥ ಕಡುಮುದ್ದು ಕೃಷ್ಣಾ ಗೋಕುಲದಲ್ಲಿ ಗೆಳೆಯರ ನೊಡನಾಡಿ ಮುದದಿ ನಲಿವಾನೊಮ್ಮೊಮ್ಮೆ ಆ ಆ ಆ । ಸಡಗರದಿಂದಾ ಪಂದ. ತಂದು ಜನನಿಯ । ಮುಡಿಯ ಜಡಿದು ಮುದ್ದನೀವನೊಮ್ಮೊಮ್ಮೇ ನಂದ ನಂದನ । ಮಡದಿಯ ತೊರದ ಕುಚಗಳ ಕರದಿಂದ । ಪಿಡಿದು ಮೊಗದಲಿ ಸವಿವಾನೊಮ್ಮೊಮ್ಮೆ ॥ ಆ ಆ ಕಡುಮುದ್ದು । ಆ ಆ ಆ ಬಡಕೋಪವಿಡಿದ ದೊಮ್ಮೆ ಕರದಿಂದ ಶಿರಪಿಡಿದು ಅಡಿಯಿಡೆ ಬೇಗ ಕಂಗೆಡುವನೊಮ್ಮೊಮ್ಮೆ । ನಡುಗುತ ಅಡಿಗಳ ಪಿಡಿದ ಭಕ್ತರುಗಳೊಡನಾಡಿ ವರದರಾಜ ಕೃಷ್ಣನ ನಪ್ಪುವಳಯ್ಯಾ ಕಡುಮುದ್ದು ॥ ೧ ॥

**ಮಟ್ಟಿತಾಳ** ॥ ಮಿಂಚುಪಡಿವ ಮಕರಕುಂಡಲಗಳನಲ್ಲಾಡಿಸ । ಪಂಚಬಾಣನ ಪಿತ ಗೋವಳರೊಳು ನಲಿದಾಡಲೂ । ಅಂಚೆಗಮನೆಯವರು

ನೋಡುತ ಮುದವೈದೇ ಪ್ರ । ಪಂಚದೊಳಗೆ ಜನಿಸಿಹ ಜೀವರುಗಳ ನೋಡಿ । ವಂಚಿಸಿ ಚರಿಸಿದ ಗೋವಳರ ವರದರಾಜ ಕೃಷ್ಣಾ । ಅಂಜಿಗವಸೆಯುವರೂ ॥ ೨ ॥

**ರೂಪಕತಾಳ** ॥ ತರಣಿಯ ಕಿರಣಗಳನ್ನೂ ಜರಿಯುತಿಪ್ಪ । ಅರಳೆಲೆಯನಲ್ಲಾಡಿಸಿದೊಮ್ಮೆ ನೊಸಲಲ್ಲಿ ಚಂದ್ರನ ಕಲೆಗಳ ಕಳೆವ ವದನಡಿ ಕಾರುಶವೈದೀಸಿ ನಸುನಗೆಯ ಸೂಸುವ ಚಂದ್ರನಾ । ಸ್ಮರಚಾಪವಾ ಹಳಿವ ಹುಬ್ಬಿನ ವಿಲಾಸದಿ । ತರಳರೊಡನೆ ಚರಿಸುತ್ತಿಹನೂ ಶಿರಿವರದ ರಾಜ ಕೃಷ್ಣಾ ॥ ೩ ॥

**ಝುಂಪೆತಾಳ** ॥ ನಗುತ ಗಹಗಹೀಸುತಿಪ್ಪನು ತಾ ಅಪ್ಪುತಲಿ ನಯ । ನಗಳನೋರೆಯ ಮಾಡಿ ದೂರ ಲಕ್ಷೀಪನೊಮ್ಮೆ । ಮಗನಾಗಿ ಆ ಆ ಆ ಆ ಆ ಯಶೋದೆಯ । ಮಗನಾಗಿ ಜಗದಂಬಾರಮಣ ಶಿರಿವರದ ರಾಜಕೃಷ್ಣ ತಾ ಮಗನಾಗಿ ॥ ೪ ॥

**ತ್ರಿಪುಟತಾಳ** ॥ ತಾನೆ ಚಪ್ಪಳೆಯಿಕ್ಕುತಾ ಮೊಗದ ಮೈಯ್ಯ । ತಾನು ಚುಂಬಿಸಿ ಸವಿವನಯ್ಯಾ । ಆನೆ ಆಟವನೊಮ್ಮೊಮ್ಮೆಯೊಡನಾಡಿ । ಆ ಮಾತೆಯೊಡನಾಡಿ ವರದರಾಜ ಕೃಷ್ಣಾ ॥ ೫ ॥

**ಅಟತಾಳ** ॥ ಕೆಂದಾವರೆಯ ದಳಂಗಳಂದದ ನಯನಗ । ಳಿಂದಾನುತಲಿರೆ ಮುಚ್ಚುವನೊಮ್ಮೊಮ್ಮೆ । ಅಂದದೊಳೆಸೆವ ಕೊರಳ ಪುಲಿಯುಗುರ ಆ । ನಂದದಲೊಲಿದಲ್ಲಾಡುವಾ ಇಂದಿರೇಯರಸ ವರದರಾಜ ಕೃಷ್ಣಾ ತಾ । ಸಿಂದುಮುಖಿಯರಿಗಾನಂದವನೀವುತಾಲ್ಯಂದದಾ ॥ ೬ ॥

**ಏಕತಾಳ** ॥ ಕರಿಕಳಭಕರವ ಜರೆವ ಕರದಿ ಬಾಹುಪುರಿ ತೋಳಬಳೆಯಿಟ್ಟು ತೋಳನಾಡುವನೊಮ್ಮೆ । ಬೆರಳೊಳೆಸೆವ ನವರತ್ನದುಂಗುರ ಒಪ್ಪುತ್ತಿರೆ ಆಹೊನ್ನ ಗುಬ್ಬಿಯಾಡುತಿರುವನೊಮ್ಮೊಮ್ಮೆ ಬೆರಳ । ಚರಣವಂದುಗೆ ಗೆಜ್ಜೆ ಘಿಲುಘಿಲು ಘಿಲುಕೆನೆ ತರಳರೊಳು ಚರಿಪ ಶಿರಿವರದರಾಜ ಕೃಷ್ಣಾ ॥ ಬೆರಳ ॥ ೭ ॥

ಜತೆ ॥ ಗೋಪಿಯರಿಂಗೆ ಲೀಲಾವೃತವನೀಂಟಿಸುತಲಿ । ಶ್ರೀಪತಿ ವರದರಾಜ ಕೃಷ್ಣಾ ಸುಳಿವನಯ್ಯಾ ಗೋಪಿಯರಿಂಗೆ ॥ ೮ ॥ ಶ್ರೀಃ ॥

## ೭೬. ಸುಳಾದಿ.

ರಾಗ ಧನ್ಯಾಸಿ.

**ಧ್ರುವತಾಳ** ॥ ಹರಿ ರವಿಯುುದಯವ ಕಾಣುತಾ । ಕರಕಮಲದಿ ಶಿರೆವಿಡಿವುತಾ । ಕರುಗಳ ಕಣ್ಣಿಯ ಕಳಚುತಾ । ಸರಿಗೋಪರ ಸ್ವರಗೈಯುತಾ । ತುರುಗಾತಿಯರ ಮೊಗವ ನೋಡುತಾ । ತರಳರ ಕರವಿಡಿವುತಾ ಶ್ರೀಹರಿ ರವಿಯುುದಯವ ಕಾಣುತಾ ಅಂ। ಬರದಲಿ ಸುರರೆಲ್ಲರು ಸ್ತುತಿಸುತ್ತಿರೆ। ಶರಣ್ಯಾಶರಣ ವರದರಾಜ ಕೃಷ್ಣಾ ತಾ । ಕರುಗಳ ಹಿಂದೆ ಮುುಂದೆ ಚಲಿಸುತಾ ಶ್ರೀಹರಿ ॥ ೧ ॥

**ಮಟ್ಟೆತಾಳ** ॥ ಕೊಳಂಗಳ ತಡಿಯಲಿ ಜಲಜಪಾತ್ರಂಗಳ ಮೇಲೆ। ಜಲಜನಾಭ ಗೆಳೆಯರೊಡಗೂಡಿ ಕಲಸೋಗರ ಸವಿವುದಚ್ಚರಿಯೇನಯ್ಯಾ ಜಲಜನಾಭಾ ॥ ಇಳೆಯ ವರದರಾಜಕೃಷ್ಣಾ ವತ್ಸಗಳನು ಕಾಯ್ದು ಜಗವಂ ಮೋಹಿಸುತಾ । ಜಲಜನಾಭ ॥ ೨ ॥

**ರೂಪಕತಾಳ** ॥ ಕಲ್ಪತರುವ ನಮ್ಮ ತ್ರಿಭಂಗಿಯಲಿ ಪೊಂಗೊಳಲೀಲಾವೃತದನ್ನೀಂಟಲೂ।ಲಲನೆಯರು ಕೇಳಿ ಸವಿವುತ್ತಾನಂದದಲಿ ಪಡಿದು ತಂದ ಚರಿಯೇನ್ನೈಯಾದದರ । ಲಲನೆಯರು ಕೇಳಿ ಯೆಳೆದ ವರದರಾಜ ಕೃಷ್ಣಾ ಕೊಳಲನೂದೆ ಲಲನೆಯರು ಕೇಳಿ ॥ ೩ ॥

**ಅಟೆತಾಳ** ॥ ಗರುಡನ ಮೇಲೆ ಉರಗ ಶಿರವನೀಡ್ದೆ । ಕರಿಯಿಂಡು ಸಿಂಹದ ಮೇಲೆ ಕರವನಿಟ್ಟಿ । ಹರಿಣಗಳೆಲ್ಲಾ ಪುಲಿಗಳೊಳು ಚರಿಸಲು । ತರಣಿಕಿರಣದಿ ಕುಮುುದಗಳರಳುತ್ತಿವೆ। ಹರಿಣಗಳೆಲ್ಲಾ ವರದರಾಜ ಕೃಷ್ಣನ ಗಾನಾವೃತವ । ಧರಿಸಿ ಮೋಹಿಸುವಾ ಸುದಿವಸವನು ನೋಡಿ ಹರಿಣಗಳೆಲ್ಲಾ ॥ ೪ ॥

**ಏಕತಾಳ** ॥ ಬಂದು ವನದಲಿ ಗೆಳೆಯರವೊಡನೆ । ಇಂದಿರಾಪತಿ ತುರುವಿಂಡುಗಳಾ ಚರಿಸುತಾ । ಅಂದದ ಕುಸುಮಾಭರಣವಾ ತಾಳುತಾ ನಂದದಿ ಕವಾಟವಾನಾಡುತಾ ಚಂದದಿ । ಮಂದಹಾಸ ವರದರಾಜ ಕೃಷ್ಣಾ ನೋಡುತ । ನಿಂದ ಸಂಭ್ರಮವಾನುಪಮಿಸಲಳವೆ ಅಂದದಾ ॥ ೫ ॥

**ಜತೆ** ॥ ನಂದ ವರದರಾಜ ಕೃಷ್ಣಾ ಮುಖೇಂದುವಾ ನಯನಚಕೋರದಿ ಸವಿವುತ್ತಾನಂದದಾ ॥ ೬ ॥ ಶ್ರೀಃ ।

## ೬೭. ಸುಳಾದಿ.

**ಧ್ರುವತಾಳ** ॥ ಸುರಮುನಿ ಭೂಸುರಲೋಕಂಗಳಲ್ಲಿ ಚರಿಸುವಾ ಪರಿಯಾ । ಅರು ವರ್ಣಿಸಲಳವೆ । ಧರಿಸಿದ ಕೆಂಜೆಡೆಯ ಕಿರಣಗಳಿಂದ ಪಿರಿನೊಸಲದಿಯೆರಡು ನಾಮುಗಳೆಂಬಾ । ವರಗದಾಶರಣಗಳೆನುತಾ ಕರಣದಿ ತೋರುತ್ತಲಿ । ಕೊರಳ ತುಲಸಿ ಸರಸಿಜಮಣಿಯು । ಸಿರಿಮುದ್ರೆ ಮೆರವುತ್ತಿರೆ । ಸರಿಗಮ ಪದನಿಸಾ ಯೆಂಬಾ ಚವುದಾ । ಸ್ವರಸೊಪಾನಗಳಿಂದಾ । ವರದರಾಜ ಕೃಷ್ಣನಾಮ ಝೇಂಕಾರಡಂಗುರ ಹೊಯ್ಯುತಾ ಸುರಮುನಿ ಚರಿಸುವಾ ಚರಿಯಲಿ । ನರಕಿಗಳನುತ್ತರಿಸುತಾ । ಸುರಮುನಿ ॥ ೧ ॥

**ಮಟ್ಟೆತಾಳ** ॥ ಘೋರ ಸಂಸಾರವಾರಿಧಿವುತ್ತಾರಕನೆಂದು । ನಾರದ ಮಾತಿನಲಿ ನಾನಾ ದುರಿತರಿಪುಯೆಂದು ಪಾಡಲು ನಾರದಾ । ಘೋರ ನರಕಿಗಳು ಲಾಲಿಸಿ ಸವಿವುತಾ । ಸಾರಿದರು ವರದರಾಜ ಕೃಷ್ಣನಾಮಪದವಿಯಾ ॥ ಘೋರನರಕಿಗಳು ॥ ೨ ॥

**ರೂಪಕತಾಳ** ॥ ಈರೆಂಟುಸಾವಿರ ನೂರೆಂಟು ಹೆಣ್ಣು ಕೃಷ್ಣಾ ವೋರಂತೆ ರಮಿಸುವಾ ಪರಿಯ ನೋಡಲೆಂದು । ಧಾರುಣಿಗೈದಿದ ನಾರದಾ ವಾರಿಜಭವವಂದ್ಯಾ ವರದರಾಜ ಕೃಷ್ಣಾ । ನಾರದಮುನಿಯನಾದರದಿ ಅರ್ಚಿಸುತಾ । ನಾರದಾ ॥ ೩ ॥

**ಅಟತಾಳ** ॥ ಒಂದು ಮನೆಯಲಿ ಮುನಿಗಳನರ್ಚಿಸುತಾ ಮ । ತ್ತೊಂದು ಗೃಹದಲ್ಲಿ ಮಡದಿಯರೊಡನಿರಲು । ಒಂದು ತಾವಿನಲೊಡ್ಡೋಲಗದೊಳಗಿಹ । ಒಂದು ಸಭೆಯೊಳುಪ್ಪರಿಗೆಗಳೊಳಗಿಹಾ । ನಂದದಂದದಿ ವರದರಾಜ ಕೃಷ್ಣನಾ ನೋಡಿ ಆ । ನಂದಸಿಂಧುವಿಲಿ ಮುಳುಗಿದನವುರ ಮುನಿ ॥ ೪ ॥

**ಏಕತಾಳ** ॥ ನಾನಾ ವನಗಳೊಳಗೆ । ನಾನಾ ಕೋಣೆಗಳೊಳಗೆ । ನಾನಾ ಸತಿಯರೊಡನೆ । ನಾನಾ ಪರಿಯಲಿ ಕ್ರಮದಲಿ ಕ್ರೀಡಿಸಿ । ನಾನಾ ಪರಿಯಲಿ ವರದರಾಜ ಕೃಷ್ಣಾ । ನಾನಾ ಪರಿಯಲಿ ॥ ೫ ॥

**ಜತೆ** ॥ ವರದರಾಜ ಕೃಷ್ಣನಾ ಕರುಣವ ಪಡವರೇ । ಸುರಮುನಿ ಸುರಮುನಿ ಚರಿತೆಯ ಸವಿಯಿರೊ ಜನರೆಲ್ಲಾ । ಸುರಮುನಿ ॥ ೬ ॥ ಶ್ರೀಃ ॥

## ೬೮. ಸುಳಾದಿ.

ರಾಗ ಗೌಳ.

**ಧ್ರುವತಾಳ** ॥ ಯೆಲೆ ಮನ ಮೊದಲಾದಖಿಲ ಜ್ಞಾನೇಂದ್ರಿಯಂಗಳೆ । ಯೆಲೆ ವಾಗ್ದೇವಿಯಾದಾ ಸಕಲ ಕರ್ಮೇಂದ್ರಿಯಂಗಳೇ । ಯೆಲೆಲೆ ತತ್ವಾಭಿಮಾನಿ ನೀವೆಂದೆನಿಪ ಸಾರ್ವಭೌಮರೇ । ಬಲದಿಂದ ಬೇಡಿಕೊಂಬೆ ದಯದಿಂದನೂಗ್ರಹಿಸೆ । ಸಲಿಗೆ ಬಿನ್ನಹವನೂ ಸಲಿಸಬೇಕಲ್ಲಾ । ಸಲೆ ಕರುಣಾಮೃತ ಸಲೆಗಯಿಸಿ ನೀವೆಲ್ಲಾ । ಗರುಡವಾಹನ ಲಕ್ಷ್ಮೀನಾರಾಯಣನ ಚಿತ್ತಕೆ ಶರಧಿನದವನೊಂದು ಧರಿಸಿದ ನೇಮವೆಂದೂ ॥ ೧ ॥

**ಮಟ್ಟೆತಾಳ** ॥ ಸ್ವರುಗವಾಗಲಿ ಅಪವರುಗವಾಗಲಿ । ಹರಿಯ ಚಿತ್ತಕೆ ಬಾರದಡಾನೊಲ್ಲೆ । ಶಿರಿಮನೆಯಾಗಲಿ ಗಿರಿಯಲೆಯಾಗಲಿ । ಪುರುಷೋತ್ತಮವಿತ್ತುದೆ ಪುರುಷಾರ್ಥವೆನಗೆ । ಗರುಡವಾಹನ ಲಕ್ಷ್ಮೀನಾರಾಯಣನ ಚಿತ್ತಕೆ । ಪ್ರತಿಕೂಲವಾದರೆ ಅಸಂಮತವೆನಗೆಂದೆಂದಿಗೆ ॥ ೨ ॥

**ರೂಪಕತಾಳ** ॥ ಶಿರಿಮನೆಯಲಿ ನಿರಿಯದಲಿ ಥಳ್ಳರಿಯಲಿ ಜಲಸ್ಥಳ । ಗಿರಿಧರೆಗಳಲಿ ಘೋರಹಿಮುಖ ದುರಿತಂಗಳಲಿ । ಅರಿಕುಲದಲಿ ಖಳರಧರೋಕ್ತಿಗಳಲಿ ಭಯವೆನಿತಿಲ್ಲಾ । ಹರಿ ತನ್ನ ಪಕ್ಷದೊಳಿಟ್ಟುಕೊಂಡು ಅನವರತ ಸಲಹುವಾ । ಅರಭಕನ ಜನನಿ ಪೋಷಿಸಲಹುವಂದದಿ ಹರಿ ತನ್ನಾ । ಗರುಡವಾಹನ ಲಕ್ಷ್ಮಿನಾರಾಯಣಾ ಇನಿತು ಪರಿಯಲಿ । ಹರೇ ಯಿಲಿವಾರಿದಿರಿನಲಿ ಸಂದೇಹವಿನಿತಿಲ್ಲಾ ॥ ೩ ॥

**ಝಂಪೆತಾಳ** ॥ ಶಿರಿ ಬೊಮ್ಮಾ ಹರ ಮೊದಲಾದಖಿಲರಿಗೊಡೆಯ । ಕರುಣಾಬ್ಧಿ ಸಚ್ಚಿದಾನಂದ ಘನಾಘನಶ್ಯಾಮ । ಪರಮಪರಮ ಸ್ವತಂತ್ರ ನೀ ಭಕ್ತರಕ್ಷಾ । ಧುರಂಧರ ನೀನೇ ಜಗಕ್ಕೆ ಮತ್ತೊಬ್ಬರಿಲ್ಲವೆಂದು । ಪರಮ ಸ್ವತಂತ್ರ ಗರುಡವಾಹನ ಲಕ್ಷ್ಮೀನಾರಾಯಣಾ ನಿನ್ನ । ಚರಣಾರವಿಂದವೆ ಗತಿಯೆಂದು ವರ್ಣಿಸಿದೆನೂ । ಪರಮ ಸ್ವತಂತ್ರ ॥ ೪ ॥

**ತ್ರಿಪುಟತಾಳ** ॥ ವರುಣಾಶ್ರಮವಿಹಿತಾಖಿಳಕರುಮಗಳಿಂದಾ । ವಿರಾಗ ಭಕುತಿ ಶಮದಮಾದಿ ಸಾಧನಗಳಿಂದಾ । ನಿರಂತರಾಶ್ರಮನನಾಗೂ ಶ್ರೀಹರಿಯ ಸಂತರ್ಪಣೆಯ ಮಾಡು ಕಂಡೆಲೊ ಜೀವಾ । ಗರುಡವಾಹನ ಲಕ್ಷ್ಮೀನಾರಾಯಣಾ ಇನಿತುಮಾಪರಿ । ಕರುಣದಿಂದಲಿ ಹಲವು ಪರಿಯಲಿ ಸಲಹುವಾ । ನಿರಂತರಾಶ್ರಮನಾಗೂ ॥ ೫ ॥

**ಅಟತಾಳ** ॥ ಹೀನನರಿಯದ ಪಾಮರ ನಿನ್ನವನಶಕ್ತ ನಾನು । ಹೀನಮನಸಿನ ದುರ್ವಿಷಯಲಂಪಟಕೂಟದ । ನಾನಾ ಅಕೃತ್ಯಪರರೊಳು ಮೊದಲಿಗ ನಾನೂ । ಯೇನುಪಾಯದಿಂ ನಿನ್ನ ಚಿತ್ತವ ಪಡವೆನಯ್ಯಾ । ದೀನನಾಥಾ ರಕ್ಷ್ಯರಕ್ಷಕ ಗರುಡವಾಹನ ಲಕ್ಷ್ಮೀನಾರಾಯಣಾ । ದಯದಿಂದ ಸಲಹೊ ದೀನನಾಥಾ ॥ ೬ ॥

**ಏಕತಾಳ** ॥ ಇನಿತಾರುವಿಧವಾದ ನಿನ್ನ ಭಕ್ತಿ । ಮನಮುಟ್ಟಿ ಮಾಡುವ ಭಾಗ್ಯವ ಯೆನಗಿತ್ತು । ಕನಸಿನಲಿ ಮತ್ತೊಂದನೆ ನೆನೆಯದಂತೆ ಮಾಡು । ಗರುಡವಾಹನ ಲಕ್ಷ್ಮೀನಾರಾಯಣ ಸ್ವಾಮಿ । ಕನಸಿನಲಿ ॥ ೭ ॥

**ಜತೆ** ॥ ಗರುಡವಾಹನ ಲಕ್ಷ್ಮೀನಾರಾಯಣ ನಿನ್ನ । ಚರಣಾರ ವಿಂದವೆ ಗತಿಯೆಂದು ವರ್ತಿಸಿದೆ । ಗರುಡವಾಹನ ಲಕ್ಷ್ಮೀನಾರಾಯಣ ॥ ೭ ॥

## ೭೯. ಸುಳಾದಿ.

ರಾಗ ಕಾನಡಾ.

**ಧ್ರುವತಾಳ** ॥ ಮನಸಿಜನಯ್ಯನ ಮೂರುತಿಯ ನೋಡಿ । ಮನೆ ಮನೆವಾರ್ತೆಗಳನೀಡಾಡಿ । ಅನುದಿನವಾತನ ದಾಸರ ಗೂಡಿ । ವನಜಾಕ್ಷನ ಭಕುತಿಯನೆ ಬೇಡಿ । ಮನದಲಿ ಧ್ಯಾನವ ಮಾಡಿ । ನೆನವರ ಮನಸಿಗೆ ಸಿಲುಕುವನವ್ವಾ । ನವ್ವಾ ಮನಸಿಜ ॥ ದಿನಗಳಾನಂದದೀಪರಿಯಲಿ ಕಳೆವ । ಮನುಜರೇನು ಸುಕೃತವ ಮಾಡಿದವರೊ ಘನಮಹಿಮ ರಂಗನಾಯಕಾ । ನೆನವರ ಮನಸಿಗೆ ಸಿಲುಕುವನವ್ವಾ ॥ ೧ ॥

**ಮಟ್ಟೆತಾಳ** ॥ ನೀರೆ ನಾನಿವನಾ ಬಿಡಲಾರೆನವ್ವಾ । ಆರನಾದರೆ ನಲ್ಲಿ ಬಿಡಲಾರೆನವ್ವಾ ॥ ಶ್ರೀರಂಗನಾಯಕ ನಾಯಕನ ಬಿಡಲಾರೆನವ್ವಾ । ಬಿಡಲಾರೆನವ್ವಾ । ಬಿಡಲಾರೆನವ್ವಾ ॥ ೨ ॥

**ರೂಪಕತಾಳ** ॥ ಅಧುನಿಕರಗುಣವಾ ಯೆನ್ನಂತರಂಗದಿರವಾ । ಸಾಧುನಿಕರಾದೊಡೆಯಾ ತಾನರಿಯನವ್ವಾ । ಶ್ರೀದೇವಿಯರಸಾ ಶ್ರೀರಂಗ ನಾಯಕಾ । ಸಾಧುನಿಕರಾದೊಡೆಯ ತಾನರಿಯನವ್ವಾ ॥ ೩ ॥

**ಝಂಪೆತಾಳ** ॥ ಯೆನ್ನೊಡನಾಡಿದ ಮಾತ ತಪ್ಪುವರೇ । ಕನ್ನಡ ಜಾಣ ಚೆನ್ನಿಗರಾಯಾ । ತನ್ನಳವಲ್ಲವೆ ನಾಯಕ ಸ್ವಾಮಿ । ಕನ್ನಡಜಾಣ ಚೆನ್ನಿಗರಾಯ । ಮನ್ನಿಸಿ ಬಿಡುವನೆ ರಂಗನಾಯಕಾ ॥ ೪ ॥

**ತ್ರಿಪುಟತಾಳ** ॥ ಅಂಜಬೇಕು ಆತನ ಕುಮಾರಗೆ । ಕಂಜನಾಭ ರಂಗನಾಯಕಾ ಮೋಹನಾಂಗಾ । ಬಾರನವ್ವಾ ಬಾರನವ್ವಾ ॥ ೫ ॥

**ಅಟತಾಳ** ॥ ಬಂದು ನೆರೆಯಲಿ ನೆರೆಯದಿರಲಿ । ಗೋವಿಂದ ಬಾರೋ ಸಲಹೋ । ಗೋಪಾಲ ಬಾರೋ ಸಲಹೋ ಕಾಯೋ । ಗೋಪಾಲ

ಬಾರೋ ಸಲಹೋ । ಮಂದರಾಧರ ರಂಗನಾಯಕ ಗೋವಿಂದ ಬಾರೋ ಸಲಹೋ ॥ ೬ ॥

**ಏಕತಾಳ** ॥ ಯೆನ್ನ ಮನವಾನಗಲದಿಹನೆಂದಭಯವಿತ್ತು । ಮನ್ನಿಸಿದಾನವ್ವಾ ಮುರಹರ । ಘನ್ನಹೋಹೊ ಮನ್ನಿಸಿದನವ್ವಾ । ವನಜನಯನನ ಪಾದಕಮಲವನನುದಿನಾ । ಮನ್ನಿಸಿದನವ್ವಾ । ತನ್ನ ನಂಬಿದರೆ ಬಿಡುವನೆ ರಂಗನಾಯಕ । ಮನ್ನಿಸಿದನವ್ವಾ ॥ ೭ ॥

**ಜತೆ** ॥ ..........................................

..........................................

## ೭೦. ಸುಳಾದಿ.

ರಾಗ ಭೈರವಿ.

**ಧ್ರುವತಾಳ** ॥ ನಡೆಯುಗಲಿಸುವರಯ್ಯ ಕೇಳಿ ಜಗದ ಪ್ರೇರಕಗಯ್ಯ । ನುಡಿಯುಗಲಿಸುವರು ಜಗನ್ಮೋಹಕಗಯ್ಯಾ । ವಡಲೊಳು ಜೀವರಾಶಿಯ ಪಿಡಿಪಿಡಿದಿಹ ದೇವನಾ ತಂ । ಮುಡಿಯಲ್ಲಿ ಕುಳ್ಳಿರಿಸಿಕೊಂಡು ಕುಣಿಸುವರಯ್ಯಾ ॥ ಕಡೆಗಣ್ಣಾ ನೋಟದಲಿ ಸುರರ ಕಾಯುವಾ ಜಗ । ದೊಡೆಯ ವರದರಾಜ ರಂಗಗೆ ಇಡುವರೆ ರಕ್ಷೆಯನೂ । ನಡೆಯುಗಲಿಸುವರೆ ಕೇಳಿ ॥ ೧ ॥

**ಮಟ್ಟೆತಾಳ** ॥ ಸೃಷ್ಟಿಯ ಈರಡಿಮಾಡಿದ ದೇವನಾ ಪೊಂ । ದೊಟ್ಟಿಲೊಳು ಮಲಗಿಸಿ ತೂಗುವರಯ್ಯಾ । ನೆಟ್ಟನೆ ಕೈವಲ್ಯವೀವ ದೇವಗೆ ಕೈಯಲಿ ಬೆಣ್ಣೆ । ಕೊಟ್ಟು ಸತಿಯರು ಮೆಲಿಸುವರಯ್ಯಾ । ಸೃಷ್ಟಿವ್ಯಾಪಕ ರಂಗನಾಥನಾ ವರದರಾಜ । ಕೃಷ್ಣನಾ ಚರಣವಾನೊರಳಿಗೆ ಕಟ್ಟುವರಯ್ಯಾ ಸೃಷ್ಟಿಯಾ ॥ ೨ ॥

**ರೂಪಕತಾಳ** ॥ ಪಿತಾಮಹಾದಿಗಳ ಪಡೆದ ದೇವನಾ ತಮ್ಮಾ । ಸುತನೆಂದಡಿಗಡಿಗೆ ಕರವರಯ್ಯಾ । ಶ್ರುತಿತತಿಮತಿಯಿಂದಾ ನುತಿಸಿಕೊಂಬ

ಕೊಂಬ ದೇವಗೆ ದು । ರ್ಮತಿಯ ಮಾಡದೆ ನೀ ಸನ್ಮತಿಯಲಿರೆಂಬರಯ್ಯಾ । ರತಿಪತಿ ಕೋಟಿರೂಪ ವರದರಾಜ ರಂಗನಾಥನಾ । ಸತಿಯರು ಶೃಂಗಾರಿಪರು ನಿಜದಾ ಚೆನ್ನಿಗನಾ ॥ ೩ ॥

ಅಟ್ಟತಾಳ ॥ ಸುರರ ಕಾಯುವಾ ದೇವರದೇವನಾ ನೋಡಿ । ತುರುಗಳ ಕ್ಯಾವರೀ ಹೋಗೆಂದಟ್ಟುವರಯ್ಯಾ । ನಿರುತ ಸುಖದಿ ಲೋಲಾಡುವ ದೇವಗೆ । ಹರುಷವೈದಿಸಿ ಹಣ್ಣು ಕ್ಯಾಗಳನೀವರಯ್ಯಾ । ಪರದೈವಾವೆಂದರಿಯದೆ ವರದರಾಜ ರಂಗನಾಥನಾ । ಪರಿಪರಿ ಹಾಸ್ಯವ ಮಾಡುವರಯ್ಯಾ । ಸುರರ ಕ್ಯಾವಾ ॥ ೪ ॥

ಏಕತಾಳ ॥ ಶಿರಿಗೆ ಸರಸಾ ಶಿರಿಯನೀವನೊಳು । ಸರಸತೆಯನು ಚದುರತೆಯನು ತೋರುವರಯ್ಯಾ । ಉರುತರ ಗರುವ ಗಂಭೀರ ದೇವನೊಡನೆ । ತರಳಾಕ್ಷಿಯರು ಕುರುಹೂಂಕ್ರಿಸುವರಯ್ಯಾ । ವರಗಳೀವಾ ವರದರಾಜ ರಂಗನಾಥಗೆ । ಸುರತಸುಖವಾ ಗೋಪಿಯರು ಕಾಮಿಸುವರಯ್ಯಾ ॥ ೫ ॥

ಜತೆ ॥ ಚಿತ್ರಗೋಪಿಯರ ಪುಣ್ಯಾವಾನೇನ ಬಣ್ಣಿಪೆನೂ ವಿ । ಚಿತ್ರ ವರದರಾಜ ರಂಗನಾಥನೊಳು ರಮಿಪರೂ ॥ ೬ ॥ ಶ್ರೀಃ ॥

---

## ೭೧. ಸುಳಾದಿ.

ಧ್ರುವತಾಳ ॥ ಹೊನ್ನು ಹಣ ಹಾಗು ವೀಸ ಯೇನು ಇಲ್ಲದ ಚಿಸಿವಾರನ ಕೈಯಲ್ಲಿ ಚಿಲಿದಂತೆ । ಗುರುಗುಂಜಿ ಕವಡೆ ಕಟ್ಟಳೆ ಕಾಳು ಮಾಶಿನ ಚಿನಿವರನ ಕೈಯ್ಯಾ ಕಪಟದಂತೆ । ಯೆನ್ನ ತನುಮನ ಅಚ್ಚಕಳಂಕವಯ್ಯಾ । ಯೆನ್ನ ತನುಮನ ಬಚ್ಚಬರಿದೆಯಯ್ಯಾ । ಬಚ್ಚಬರಿಯಾದೆ ಭಕತನಾನಯ್ಯಾ । ಅಚ್ಯುತವಿಠಲನ ಭಕತಿಯೊಳಿಪ್ಪುದಿಲ್ಲಾ । ಅಚ್ಯುತವಿಠಲನ ವ್ಯವಹಾರಿ ನಾನಯ್ಯಾ । ಹೊನ್ನು ಹಣ ಹಾಗು ವೀಸಾ ॥ ೧ ॥

**ಮಟ್ಟೆತಾಳ** ॥ ಮಡಕೆಯ ಕಂಠಕೆ ಮಣಿಯಿಕ್ಕಿದಂತೆ । ಅಡಕಾವೆನ್ನ ಕೊರಳಾ ತುಲಸಿ । ಮಡಕೆಗೆ ಹರಿಯಾ ಭಕುತಿಯುಂಟೆ ಹೇಳಿರೋ । ಮುಕ್ಕು ಮಡಕೆಗೆ ಆಹರಣತನವುಂಟೆ ಹೇಳಿರೋ । ಕಾಮಕ್ರೋಧವೆಂಬಾ ಕತ್ತೆಯು ಲದ್ದಿಯಲಿ ಮಾಡಿದ । ಮಡಕೆಗೆ ಹರಿಯಾ ಭಕ್ತಿಯುಂಟೆ ಹೇಳಿರೋ । ಅಚ್ಯುತವಿಠಲನ ಚಕ್ರಮಡಕೆಗೆ ಹರಿಯಾ ಭಕುತಿಯುಂಟೆ ಹೇಳಿರೋ ॥ ೨ ॥

**ರೂಪಕತಾಳ** ॥ ಸೊಪ್ಪಿನ ತೋಟಕ್ಕೆ ರಕ್ಷೆಯಾ ಬೋರ್ಡಿಗಾಗಿ ಸುಣ್ಣವಾ ಬತ್ತಿಸಿ ಯೆನ್ನಂಗಕ್ಕೆ ಗೋಪಿಚಂದನಗಳೂ । ಊರ್ಧ್ವಪುಂಡ್ರಗಳು ದ್ವಾದಶನಾಮವ ಬಾಚಿಸಿಕೊಂಬೆನಯ್ಯಾ । ಹೊರಗೆ ದಂಡ ಒಳಗೆ ಬಟ್ಟೆ ಬೈಲು ನಾಚಿಕೆಯಿಲ್ಲದೆ ಬಾಚಿಸಿಕೊಂಬೇನಯ್ಯಾ । ಅಚ್ಯುತವಿಠಲ ಭಕುತಿ ಯೆಳ್ಳಷ್ಟು ಇಲ್ಲ ನಾಚಿಕೆಗೊಂಬೆನಯ್ಯಾ । ಜನರ ಮೋಹಕ್ಕಾಗಿ । ಸೊಪ್ಪಿನ ತೋಟಕ್ಕೆ ॥ ೩ ॥

**ಅಟ್ಟತಾಳ** ॥ ಮುದ್ರೆಯೊತ್ತಿದ ಸೂಳೆ ಕಾಮುಕರ ಸುಲಿವಂತೆ ನಿಜ ಭಕ್ತ ನಾನೆಂದು ಸುಲಿವೆನೊ ಧನಿಕರನೂ । ಹರಿಯಾ ಮುದ್ರಾಧಾರಿತಾನೆಂದು ನಂಬಿಸಿ ಭೂಚಕ್ರಮುದ್ರೆಯೊತ್ತಿ ಸುಲಿವೆನೂ ಧನಿಕರನೂ । ಹೊರಗೆ ದಂಡಮುದ್ರೆ ಒಳಗೆ ಕಳ್ಳಮುದ್ರೆಯಿಪ್ಪುದ ಕಂಡು ನಗುತಿರ್ದ ಅಚ್ಯುತಾವಿಠಲರಾಯಾ ಸುಲಿವೆನೂ ಧನಿಕರನೂ ॥ ೪ ॥

**ಏಕತಾಳ** ॥ ವೋದಲಿಲ್ಲಾ ಕೇಳಲಿಲ್ಲಾ ಮಗನ ಹೆಸರು ಪಾರ್ಥನೆಂಬರು । ವೋದಲಿಲ್ಲಾ । ವೇಷದ ಭಾಗವತನೆನಿಸಿಕೊಂಬೆನೂ । ವೋದಲಿಲ್ಲಾ ಕೇಳಲಿಲ್ಲ । ಅಚ್ಯುತವಿಠಲನ ಕಿಂಕರನೆನಿಸಿಕೊಂಬೆನೂ । ವೋದಲಿಲ್ಲ ಕೇಳಲಿಲ್ಲ ॥ ೫ ॥

**ಜತೆ** ॥ ಡಂಬಕತನದಲಿ ಪುಟ್ಟಿಯೂ ಪೊರವೆ ವಿಡಂಬನ ಪಾಲಿಸೂ । ಅಚ್ಯುತಾವಿಠಲರಾಯಾ ಡಂಬಕತನದಲಿ ಪುಟ್ಟಿಯೂ ಪೊರವೆ ॥ ೬ ॥



## ೭೨. ಲೋಭಿಸುಳಾದಿ.

ರಾಗ ಶಂಕರಾಭರಣ.

**ಧ್ರುವತಾಳ** ॥ ಕಲ್ಪಾಂತವಾದಡಂ ಕೇಡಿಲ್ಲ ಯೆನಗೆಂದು । ಕುಪ್ಪೆಯ ಮಾಡಿ ಧನವಾ ಹೂಳಿ ಬ್ಯಚಿಟ್ಟಡಂ । ಮುಪ್ಪಿನ ಕಾಲಕ್ಕೆ ಈ ಧನವೆನಗೆ ಜೀವನ್ನಾ । ಯೆನ್ನ ಪ್ರಾಣವಳಿದಂದಿಗೆ ಯೆನ್ನ ಸ್ತ್ರೀಪುತ್ರಾದಿಗಳಿಗೆಂದು ಆ ಪಾತಾಳದೊಳಡಗಿರಿಸಿ । ಆ ಧನಕೆ ಬಂದ ವಿಘ್ನಗಳ ತಪ್ಪಿಸಿ । ತದ್ಗತಮಾನಸನಾಗಿ ನಮ್ಮಚ್ಯುತವಿಠಲನ ಮರದು । ತಾನೇ ಕಾದಿಹನಾಗಿ । ಕಲ್ಪಾಂತವಾದಡುಂ ॥ ೧ ॥

**ಮಟ್ಟತಾಳ** ॥ ಫಣಿಗೆ ಲೋಭಿಗೆ ಭೇದವಾಗದು । ಫಣಿ ತಾನುಣ್ಣಾದೆ ಪರರಿಗೀಯದೆ ಮುಟ್ಟಗೊಡದೆ ತಾ । ಕ್ಷಣ ತೊಲಗದೆ ಕಾದಿಹದದರಿಂದಿವತ್ತ್ರಾಂ । ಬಣಗು ಲೋಭಿಗೆ ನಮ್ಮ ಅಚ್ಯುತವಿಠಲ ಮೆಚ್ಚ ಯೆಷ್ಟೊ । ದುಣಿಸುವಾ ನರಕಯಾತನೆಗಳಾ । ಫಣಿಗೆ ಲೋಭಿಗೆ ॥ ೨ ॥

**ರೂಪಕತಾಳ** ॥ ಜನ್ಮಕೋಟಿಗಳಲ್ಲಿ ಬೊಮ್ಮರಕ್ಕಸನಾಗಿ । ಜನ್ಮವರ್ಮವರಿದಾ ಲೋಭಿಯಾದಾ ಸಂದೇಹವಿಲ್ಲಾ । ಜನ್ಮಕೋಟಿಗಳಲ್ಲಿ ನಮ್ಮ ಅಚ್ಯುತವಿಠಲ ಬೊಮ್ಮರಕ್ಕಸನಾ । ಯೋನಿಗೆ ನೂಕುವನಾಗಿ ಬೊಮ್ಮರಕ್ಕಸ ಇವಗೇನು ಭೇದಾ ॥ ೩ ॥

**ಶ್ಲೋಕ** ॥ ಚತ್ವಾರೋ ವಿತ್ತದಾಯಾದಾ ಧರ್ಮಾಗ್ನಿನೃಪತಸ್ಕರಾಃ । ಜ್ಯೇಷ್ಠಭ್ರಾತ್ರವಮಾನೇನ ತ್ರಯಃ ಕುಪ್ಯಂತಿ ಸೋದರಾಃ ॥

**ಅಟತಾಳ** ॥ ಧರ್ಮಾಗ್ನಿ ನೃಪ ಚೋರರೆಂಬಾ ನಾಲ್ವರು । ಧರ್ಮವರಿದ ದಾಯಾದ್ಯರೂ । ಧನವಾ । ಧರ್ಮದಾಯಾದ್ಯನ ಮನ್ನಿಸದಿರ್ದಡೆ । ಅವರು ತಮ್ಮ ತಮ್ಮ ಪಾಲೊಡವೆ ಸೆಳದುಕೊಂಬಂತೆ । ಮುವ್ವರೂ ಪುಣ್ಯದಿಂದ ನರನೆಲರ ಕಳದುಳಿದರೆ । ಅಚ್ಯುತವಿಠಲನಾಳಂತಕನವರೂ । ಸೂರೆಗೊಂಬರೂ ॥ ಧರ್ಮಾಗ್ನಿ ನೃಪ ಚೋರರೂ ॥ ೪ ॥

ಏಕತಾಳ ॥ ಇದ್ದಿಲ್ಲವೆಂದು ಮುಷ್ಟಿಯ ಮಾಡಿ ಕೂಳಿವಡೆ ಧನಂಗಳಾ । ಇದ್ದಿಲ್ಲವೆನ್ನದಿರಯ್ಯಾ ನೀ । ಬುದ್ಧಿಯ ಬಲ್ಲ ಬಲ್ಲದುಂಟಾದಡೆ ಧನ । ಇದ್ದಿಲ್ಲವೆನ್ನದಿರಯ್ಯಾ ಧನ । ಇದ್ದಿಲ್ಲವೆಂಬುದನ್ನ ಕಂಡು ಲುಬ್ಧಕತನದಲಿ ಧನ । ಇದ್ದಿಲ್ಲವೆನ್ನದಿರಯ್ಯಾ । ಇದ್ದಿಲ್ಲವೆಂದಡೆ ಇದ್ದಿಲ್ಲಮಾಳ್ಪ ನಮ್ಮ ಅಚ್ಯುತವಿಠಲರಾಯಾ । ಇದ್ದಿಲ್ಲವೆನ್ನದಿರಯ್ಯಾ ॥ ೫ ॥

ಜತೆ ॥ ಇಂತಪ್ಪ ಲೋಭಿಯರೆಂಬಾ ಪತಿತರ ಸಂಗಕ್ಕೆನ್ನಾ । ಒಪ್ಪಿಸಿಕೊಡದಿರೆನ್ನ ಅಚ್ಯುತವಿಠಲರಾಯಾ ॥ ೬ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

# ಪುರಂದರದಾಸರ ಸುಳಾದಿಗಳು




॥ ಶ್ರೀಕೃಷ್ಣಾರ್ಪಣಮಸ್ತು ॥

ಈ ಪುಸ್ತಕವು

**ಸಾವಂಜಿ ಗುರುರಾವ್,**

ಇವರ

ಉಡುಪಿ ಶ್ರೀಕೃಷ್ಣಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟು,

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯದಿಂದ ಪ್ರಕಟಿಸಲ್ಪಟ್ಟಿತು.

ಶಾ. ಶಕ ೧೮೪೯. 1927.